# ಎ.ಎನ್ ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು

ಕನ್ನಡ ಎಂ.ಫಿಲ್ ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ
'ಎಂ.ಫಿಲ್'. ನಿಬಂಧ'

**2015–2016**


ಸಂಶೋಧಕರು :
ದೇವರಾಜು ಬಿ.ಎಸ್

ನೋಂದಣಿ ಸಂಖ್ಯೆ: 151201030067

ಮಾರ್ಗದರ್ಶಕರು :
**ಡಾ.ಪಿ. ಬೆಟ್ಟೇಗೌಡ**
ಕನ್ನಡ ಸಹಪ್ರಾಧ್ಯಾಪಕರು,
ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ವಿಜಯನಗರ, ಮೈಸೂರು.

ಅಧ್ಯಯನ ಕೇಂದ್ರ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕರ್ನಾಟಕ ಸಂಘ (ರಿ.), ಮಂಡ್ಯ





ಕನ್ನಡ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ–583276




# ಎ.ಎನ್ ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು

ಕನ್ನಡ ಎಂ.ಫಿಲ್ ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ
'ಎಂ.ಫಿಲ್. ನಿಬಂಧ'

2015–2016


ಸಂಶೋಧಕರು : ದೇವರಾಜು ಬಿ.ಎಸ್

**ನೋಂದಣಿ ಸಂಖ್ಯೆ: 151201030067**





ಕನ್ನಡ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ–583276

## ಮಾರ್ಗದರ್ಶಕರ ದೃಢೀಕರಣ ಪತ್ರ

2015–16ನೇ ಸಾಲಿನಲ್ಲಿ **ದೇವರಾಜು. ಬಿ.ಎಸ್** ಎಂ.ಫಿಲ್ ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ " **ಎ.ಎನ್.ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು** ' ಎಂಬ ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಇದನ್ನು ಇವರು ಮೊದಲು ಯಾವುದೇ ಪದವಿ, ಡಿಪ್ಲೋಮ ಅಧ್ಯಯನಕ್ಕಾಗಲಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

ಸ್ಥಳ : ಮಂಡ್ಯ

ದಿನಾಂಕ: 10.8.2015

ಮಾರ್ಗದರ್ಶಕರು

ಡಾ. ಪಿ. ಬೆಟ್ಟೇಗೌಡ

ಕನ್ನಡ ಸಹಪ್ರಾಧ್ಯಾಪಕರು

ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು

ವಿಜಯನಗರ, ಮೈಸೂರು-570018

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘದ ಶ್ರೀಕಂಠೇಶಗೌಡ, ಸಂಶೋಧನಾ ಕೇಂದ್ರದಲ್ಲಿ 2015–16ರ ಸಾಲಿಗೆ ಕನ್ನಡ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಎ.ಎನ್.ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು" (ಅಲೆಯುವಮನ.ಹಗಲುಗನಸುಗಳು.ಮಿನುಗುಮಿಂಚು)** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು **ಡಾ. ಪಿ. ಬೆಟ್ಟೇಗೌಡ** ರವರ ಮಾರ್ಗದಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಯಾವುದೇ ಅಧ್ಯಾಯವನ್ನಾಗಲಿ, ಬೇರೆ ಯಾವ ಗ್ರಂಥ ಅಥವಾ ನಿಯತಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ. ಫಿಲ್(ಕನ್ನಡ) ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ

ದಿನಾಂಕ: 10-08-2016.

ಸಂಶೋಧನಾ ವಿದ್ಯಾರ್ಥಿ

ದೇವರಾಜು. ಬಿ.ಎಸ್.

ರಿ. ನಂ: 151201030067

ಕರ್ನಾಟಕ ಸಂಘ(ರಿ). ಮಂಡ್ಯ.

# ಪರಿವಿಡಿ

## ಎ. ಎನ್. ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು:-

ಎ. ಎನ್. ಮೂರ್ತಿರಾವ್ ಅವರು ಲಲಿತ ಪ್ರಬಂಧಗಳನ್ನು ಬರೆದವರಲ್ಲಿ ಪ್ರಮುಖರು. ಕನ್ನಡ ಸಾಹಿತ್ಯದ ಲೋಕದಲ್ಲಿ ಖ್ಯಾತಿಯನ್ನು ಪಡೆದು ಶ್ರೇಷ್ಠತೆಯನ್ನು ಪಡೆದಿದ್ದರು. ಎಂದು ಗಮನಿಸಬಹುದು ಲೇಖಕರು ತಮ್ಮ ಲಲಿತ ಪ್ರಬಂಧಗಳಲ್ಲಿ ವೈಜ್ಞಾನಿಕ ವೈಚಾರಿಕ ವೈಶಿಷ್ಟತೆ ಅನುಭವಗಳ ರೂಪದಲ್ಲಿ ಬರೆದಿರುವುರು. ಲೇಖಕರು ಪ್ರಬಂಧಗಳನ್ನು ಬರೆಯುವುದಕ್ಕೂ ಮೊದಲು ಪುಸ್ತಕ ಸಂಗ್ರಹ ಮಾಡಿ ಅವುಗಳನ್ನು ಓದಿ ಹೆಚ್ಚಿನ ವಿಷಯ ಜ್ಞಾನವನ್ನುವುಳ್ಳವರಾಗಿದ್ದು. ಪ್ರಬಂಧಗಳನ್ನು ಯಾವ ರೀತಿಯಲ್ಲಿ ಬರೆಯಬೇಕು. ಅದರ ರೂಪತೆಯನ್ನು ಸವಿಸ್ತಾರವಾಗಿ ಎಳೆಯ ರೂಪದಲ್ಲಿ ಬಿಡಿಸಿ ಎಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಬರೆದು ಸಾಹಿತ್ಯದ ರುಚಿಯನ್ನು ಒಳಗೊಂಡಿರುವವರಿಗೆ ಸರಳವಾಗಿ ಅರ್ಥವಾಗುವಂತೆ ಬರೆದಿರುವರು ಲೇಖಕರು ಬಾಲ್ಯದಿಂದಲೂ ಬೆಳೆದಿರುವ ಕೆಲವೊಂದು ಘಟನೆಗಳನ್ನು ಮೆಲಕು ಹಾಕಿ ತಮ್ಮ ನೆನಪುಗಳನ್ನು ಬರಹಗಳ ರೂಪದಲ್ಲಿ ಬರೆದಿದ್ದಾರೆ. ಲೇಖಕರು ಹಂತ ಹಂತವಾಗಿ ಸಾಹಿತ್ಯದಲ್ಲಿ ತೊಡಗಿಸಿಕೊಂಡು ಮೇಲೆ ಬಂದರೂ ಎಂದರೆ ತಪ್ಪಾಗಲಾರದು. ಲೇಖಕರು ಬರೆದಿರುವ ಲಲಿತ ಪ್ರಬಂಧ ಸಂಕಲನಗಳು ಮೂರು ಅವುಗಳೆಂದರೆ 'ಹಗಲುಗನಸುಗಳು' 'ಅಲೆಯುವ ಮನ' 'ಮಿನುಗುಮಿಂಚು' ಈ ಸಂಕಲನಗಳಲ್ಲಿ ಮುವತ್ತಾನಾಲ್ಕು ಪ್ರಬಂಧಗಳು ಇದೆ. ಇವುಗಳಲ್ಲಿ ಒಂದೊಂದು ತನ್ನದೇ ಆದ ಪ್ರಾಮುಖ್ಯತೆಯನ್ನು ಪಡೆದಿವೆ. ಎ. ಎನ್. ಮೂರ್ತಿರಾವ್ ಅವರ ಸಾಹಿತ್ಯವನ್ನು ಕುರಿತು ವಿಮರ್ಶನ ಬರಹಗಳು ಬಂದಿದ್ದರೂ ಇವರ ಲಲಿತ ಪ್ರಬಂಧಗಳನ್ನು ಕುರಿತಂತೆ ಸಮಗ್ರವಾಗಿ ಅಧ್ಯಯನ ನಡೆದಿಲ್ಲ ಆದ್ದರಿಂದ ಇವರ ಮೂರು ಸಂಕಲನ ಗಳಲ್ಲಿ ಹರಡಿರುವ ಒಟ್ಟು ಲಲಿತ ಪ್ರಬಂಧಗಳನ್ನು ಪ್ರತ್ಯೇಕವಾದ ಅಧ್ಯಯನಕ್ಕೆ ಒಳಗು ಮಾಡುವುದು ತೀರಾ ಅವಶ್ಯವೆಂದು ಭಾವಿಸಿ ಮುಂದಿನ ಕ್ರಮದಲ್ಲಿ "ಎ.ಎನ್ ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು' ಎಂಬ ವಿಷಯದಲ್ಲಿ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಲು ನಿರ್ಧರಿಸಿದ್ದೇನೆ.

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ:-

ಪ್ರಬಂಧಗಳಲ್ಲಿ ಒಂದು ಬಗೆಯಾದ ಲಲಿತ ಪ್ರಬಂಧಗಳು ಇಂದಿನ ದಿನಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಲಲಿತ ಪ್ರಬಂಧಗಳು ಎಂದರೆ ಸಾಮಾನ್ಯವಾಗಿ ನಮ್ಮ ಕಣ್ಣಮುಂದೆ ನಡೆದಂತಹ ಕಥೆ ಘಟನೆಗಳನ್ನು ಪ್ರಬಂಧದ ರೂಪದಲ್ಲಿ ಲಲಿತವಾಗಿ ಬರೆಯುವುದಾಗಿದೆ.ಇಲ್ಲಿ ಬರಹಗಾರನ ಮುಖ್ಯ ಕೆಲಸವೇನೆಂದರೆ ಪ್ರಬಂಧಗಳನ್ನು ಲಲಿತವಾಗಿ ಬರೆಯುವುದು. ಅದರ ವಸ್ತುಸ್ಥಿತಿಯನ್ನು ಸರಳವಾಗಿ ಓದುಗನಿಗೆ ತಿಳಿಸುವಂತಿರಬೇಕು. ಇದೇ ರೀತಿ ಪ್ರಬಂಧಗಳನ್ನು ರಚಿಸಿರುವ ಕನ್ನಡ ಸಾಹಿತ್ಯದಲ್ಲಿಯು ಇದರ ಬೆಳವಣಿಗೆ ಶ್ರೀಮಂತವಾಗಿದೆ. ಈ ರೀತಿ ಬರೆದಿರುವ ಪ್ರಮುಖರೆಂದರೇ " ಗೊರೂರು ರಾಮಸ್ವಾಮಿ ಅಯ್ಯಂಗಾರ್ . ವಿ, ಸೀತಾರಾಮಯ್ಯ. ಅ, ರಾ, ಮಿತ್ರ, ತೀ, ನಂ,ಶ್ರೀ. ಕುವೆಂಪು. ಎ, ಎನ್, ಮೂರ್ತಿರಾವ್, ಪು,ತಿ, ನರಸಿಂಹಚಾರ್, ಮಾಸ್ತಿ, ವೆಂಕಟೇಶ ಅಯ್ಯಂಗಾರ್. ಮುಂತಾದವರು ಕನ್ನಡದ ಪ್ರಬಂಧಕಾರರಾಗಿದ್ದಾರೆ. .

ಎ. ಎನ್ ಮೂರ್ತಿರಾವ್ ಅವರು ಪ್ರಬಂಧ ಸಾಹಿತ್ಯಕ್ಕೆ ವಿಶಿಷ್ಟವಾದ ಕೊಡಗಯನ್ನು ನೀಡಿ ಆ ಕ್ಷೇತ್ರದಲ್ಲಿ ತಮ್ಮ ವಿಶಿಷ್ಟ ಸ್ಥಾನವನ್ನು ಗುರುತಿಸಿಕೊಂಡಿದ್ದಾರೆ. ಗ್ರಾಮೀಣ ಮತ್ತು ನಗರ ಪರಿಸರದ ಪ್ರಭಾವದಿಂದ ವೈಚಾರಿಕ ಮನಸ್ಸಿನ ಎ. ಎನ್. ಮೂರ್ತಿರಾವ್ ತಮ್ಮ ಪ್ರಬಂಧಗಳಲ್ಲಿ ಹಲವು ವಸ್ತು ಗಳನ್ನು ತೆಗೆದುಕೊಂಡು ಪ್ರಬಂಧಗಳಲ್ಲಿ ರಚಿಸಿದ್ದಾರೆ. ಆದುದರಿಂದ " ಎ. ಎನ್. ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು ಎಂಬ ಶೀರ್ಷಿಕೆಯೊಂದಿಗೆ ಅವರ ಪ್ರಬಂಧದ ಅಧ್ಯಯನ ಮಾಡುವ ಉದ್ದೇಶ ಹೊಂದಿದ್ದೇನೆ. ಲೇಖಕರು ಲಲಿತ ಪ್ರಬಂಧಗಳೆಂದರೇನು? ಮತ್ತು ಅದರ ಸ್ವರೂಪವನ್ನು ಈ ಮೂಲಕ ತಿಳಿದುಕೊಳ್ಳವುದು. ಎ.ಎನ್. ಮೂರ್ತಿರಾವ್ ಅವರ ಲಲಿತ ಪ್ರಬಂಧಗಳು ಗುಣ ಮತ್ತು ದೋಷಗಳ ಬಗ್ಗೆ ಸಂಪೂರ್ಣ ಸಮೀಕ್ಷೆಯನ್ನು ಮಾಡುವುದು. ಈ ಸಂಶೋಧನೆಯ ಉದ್ದೇಶವಾಗಿರುತ್ತದೆ. ಈ ರೀತಿಯ ಸಮೀಕ್ಷೆಯಿಂದ ಎ.ಎನ್. ಮೂರ್ತಿರಾವ್ ಅವರ ಆಸಕ್ತ ವಿಷಯಗಳು ಮನಸ್ಥಿತಿ ಸಾಹಿತ್ಯಪ್ರಜ್ಞೆ ಲೋಕದೃಷ್ಟಿ ಸಾಮಾಜಿಕ ಪ್ರಜ್ಞೆ ಸಾಮಾಜಿಕ ಕಳಕಳಿ ಇವುಗಳೊಂದಿಗೆ ಅವರಿಗೆ ಇರುವ ವೈಚಾರಿಕ ಮತ್ತು ವೈಶಿಷ್ಟ್ಯತೆಯನ್ನು ಅರ್ಥಮಾಡಿಕೊಳ್ಳಬಹುದು. ಎಂಬ ಉದ್ದೇಶದೊಂದಿಗೆ ಈ ನಿಬಂಧನ್ನು ಸಿದ್ಧಗೊಳಿಸುತ್ತಿದ್ದೇನೆ.,.

ಅಧ್ಯಾಯನದ ವ್ಯಾಪ್ತಿ:-

ಎ, ಎನ್. ಮೂರ್ತಿರಾವ್ ಅವರು 'ಹಗಲುಗನಸುಗಳು' 'ಅಲೆಯುವ ಮನ' ಮಿನುಗುಮಿಂಚು' ಎಂಬ ಮೂರು ಪ್ರಬಂಧ ಸಂಕಲನಗಳನ್ನು ಬರೆದಿದ್ದಾರೆ. ಲೇಖಕರು ಬರೆದಿರುವ ಲಲಿತ ಪ್ರಬಂಧಗಳನ್ನು ಆಯ್ಕೆ ಮಾಡಿಕೊಂಡಿದ್ದೇನೆ. ಈ ಮೂರು ಪ್ರಬಂಧ ಸಂಕಲನಗಳಲ್ಲಿ ಒಟ್ಟು ಮುವತ್ತಾನಾಲ್ಕು ಪ್ರಬಂಧಗಳಿವೆ. ಇಷ್ಟು ಪ್ರಬಂಧಗಳಲ್ಲಿರುವ ವಸ್ತು ಉದ್ದೇಶವನ್ನು ಗುರುತಿಸುತ್ತಿದ್ದೇನೆ ಈ ಹಿನ್ನಡೆಯಲ್ಲಿ ಅಧ್ಯಯನವನ್ನು ಈ ಕೆಳಕಂಡ ಅಧ್ಯಾಯಗಳ ಮೂಲಕ ಪ್ರವೇಶಿಸುತ್ತಿದ್ದೇನೆ.

ಮೊದಲಿಗೆ ಈ ಹಿನ್ನಲೆಯಲ್ಲಿ ಅಧ್ಯಯನವನ್ನು ' ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಲಲಿತ ಪ್ರಬಂಧಗಳ ಸ್ವರೂಪ ಮತ್ತು ಲಕ್ಷಣಗಳು ಎ, ಎನ್ ಮೂರ್ತಿರಾವ್ ಅವರ ಲಲಿತ ಪ್ರಬಂಧಗಳ ವಸ್ತು ವೈವಿಧ್ಯ ಲಲಿತ ಪ್ರಬಂದಗಳ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿ' ಲಲಿತ ಪ್ರಬಂಧಗಳ ವೈಶಿಷ್ಟಗಳು' ಎಂಬ ಕ್ರಮದಲ್ಲಿ ಅಧ್ಯಾಯಗಳನ್ನು ಮಾಡಿಕೊಂಡಿದ್ದೇನೆ. ಉಪಸಂಹಾರ ಎಂಬ ಅಧ್ಯಾಯದಲ್ಲಿ ಕಂಡುಕೊಂಡ ಅಧ್ಯಯನದ ಫಲಿತಗಳನ್ನು ಚರ್ಚಿಸಿದ್ದೇನೆ.

ಅಧ್ಯಾಯ.2

## ಲಲಿತ ಪ್ರಬಂಧಗಳ ಸ್ವರೂಪ ಮತ್ತು ಲಕ್ಷಣಗಳು

### ಪ್ರಬಂಧ ಸಾಹಿತ್ಯ :

ಪ್ರಬಂಧ ಸಾಹಿತ್ಯ ಕನ್ನಡದಲ್ಲಿ ಇತ್ತೀಚೆಗೆ ಒಂದು ಆಕರ್ಷಣೀಯ ಸಾಹಿತ್ಯ ಪ್ರಕಾರವಾಗಿದೆ. ಇದು ನಮಗೆ ಇಂಗ್ಲೀಷ್ ಸಾಹಿತ್ಯದ ಪ್ರಬಂಧದಿಂದ ಬಂದಿತಾದರೂ ಈ ಬರವಣಿಗೆಯ ಜಾಯಮಾನದ ಮೂಲಧಾತು ನಮ್ಮಲ್ಲಿಯು ಇತ್ತು ಉಪನಿಷತ್ತು. ಪುರಾಣಗಳು.ಕಾವ್ಯನಾಟಕಗಳು, ಇದಕ್ಕೆ ಆಕಾರಗಳಾಗಿದ್ದವು. "ಪ್ರಬಂಧ" ಎಂಬ ಪದ ಕೂಡ ಕನ್ನಡಕ್ಕೆ ಹೊಸದೇನಲ್ಲ, 'ಪಂಪ' ತನ್ನ ಆದಿಪುರಾಣ.ಮಹಾಕಾವ್ಯವನ್ನು ಪ್ರಬಂಧ ಎಂದೇ ಕರೆದಿದ್ದಾರೆ. ಸಂಸ್ಕೃತದ ಬಲ್ಲಾಳದೇವ ತನ್ನ ಚಂಪೂ ಕಾವ್ಯವನ್ನು "ಭೋಜಪ್ರಬಂಧ" ಎಂದೇ ಕರೆದಿದ್ದಾನೆ. 'ಯಕ್ಷಗಾನವನ್ನು ಪ್ರಬಂಧ'ವೆಂದೇ ತಿಳಿಯಲಾಗಿದೆ. ಇದರಿಂದ ನಮಗೆ 'ಪ್ರಬಂಧ' ಎಂಬ ಪದದ ಅರ್ಥ ಚೆನ್ನಾಗಿ ಕಟ್ಟಿದ್ದು (ಪ್ರ +ಬಂಧ) ಎಂಬುದಾಗಿ ವಿಷಯಗಳ ಬಂಧ. ಒಳ್ಳೆಯ ರಚನೆ ಎಂಬುದಾಗಿಯೂ ಇದು ತಿಳಿಸುತ್ತದೆ. ಪ್ರಬಂಧ ಸಾಹಿತ್ಯವು ತನ್ನ ತನ್ಮಯತೆಯನ್ನು ಪಡೆದುಕೊಂಡಿದೆ. ವೈಚಾರಿಕ ವೈಜ್ಞಾನಿಕ. ವೈಶಿಷ್ಟ್ಯತೆಗಳಿಂದ ಕೂಡಿದ್ದು ಪ್ರಬಂದವು ಖ್ಯಾತಿಯನ್ನು ಗಳಿಸಲು ಸಹಾಯಕವಾಗಲಿದೆ. ಈಗ 'ಪ್ರಬಂಧ' ಎಂಬ ಪದವನ್ನು ಇಂಗ್ಲೀಷಿನ "ಎಸ್ಸೆ" (ಜಚಿಥಿ) ಎಂಬ ಪದಕ್ಕೆ ಸಂವಾದಿಯಾಗಿ ಬಳಸುತ್ತಿದ್ದೇವೆ. ಆಗ ಸಾಮಾನ್ಯರ್ಥಕವಾಗಿದ್ದು ಈ ಪದ ಈಗ ಸಾಹಿತ್ಯದ ಒಂದು ಪ್ರಕಾರಕ್ಕೆ ಮಾತ್ರ ಮೀಸಲಾದ ವಿಶೇಷಾರ್ಥಕವಾಗಿದೆ. ಇದರಿಂದಾಗಿ, ನಮ್ಮಲ್ಲಿ ಈಗ ಪ್ರಬಂಧ ಪದದ ಅರ್ಥ ವ್ಯಾಪ್ತಿ ಚಿಕ್ಕದಾದ್ದು ಮಾತ್ರವಲ್ಲದೇ,ಸ್ಥೂಲವಾಗಿ ಅರ್ಥ ಬದಲಾವಣೆಯೂ ಆಗಿರುವುದು ಕಂಡುಬರುತ್ತದೆ. ಅದು ಮರುಹುಟ್ಟನ್ನು ಪಡೆದುಕೊಂಡಿದ್ದು ಪ್ರಬಂಧ ಸಾಹಿತ್ಯದ ಜಾಯಮಾನದ ಮೂಲರೂಪ ನಮ್ಮಲ್ಲಿಯು ಇತ್ತು. ಎಂದ ಮಾತ್ರಕ್ಕೆ ಈಗಿನ ಪ್ರಚಲಿತ ಪ್ರಬಂಧ ಸಾಹಿತ್ಯ ಅದರ ಬೆಳೆದ ರೂಪ ಎಂದು ವಾದಿಸಿದರೆ ತಪ್ಪಾಗುತ್ತದೆ, ಇದು ಸಂಪೂರ್ಣವಾಗಿ ಇಂಗ್ಲೀಷ ಸಾಹಿತ್ಯದ ಪ್ರಭಾವದಿಂದ ಮೂಡಿ ಬಂದ ವಿಶಿಷ್ಟ ಸಾಹಿತ್ಯ ಪ್ರಕಾರ ಎನ್ನಬಹುದಾಗಿದೆ.

ವಾಸ್ತವವಾಗಿ ಫ್ರೆಂಚ್ ಭಾಷೆಯ "ಎಸ್ಸೆಯ" ಇಂಗ್ಲೀಷನಲ್ಲಿ "ಎಸ್ಸೆ" (ಜಚಿಥಿ) ಎಂದಾಯಿತು. ಈ ಪದದ ಅರ್ಥ ಒಂದು ಪ್ರಯೋಗ. ಪ್ರಯತ್ನ. ಉದ್ಯಮ ಎಂಬುದಾಗಿ ಈ ಪದದ

ಅರ್ಥ ವ್ಯಾಪ್ತಿಯನ್ನುಳ್ಳ ಸಮಾನಾರ್ಥಕ ಪದ ನಮ್ಮಲ್ಲಿಲ್ಲ. ಆದ್ದರಿಂದ ಕನ್ನಡದಲ್ಲಿಯು 'ದಿ ಎಸ್ಸೆ' ಎಂದೇ ಇಟ್ಟುಕೊಳ್ಳ ಬಹುದೆಂದು ಕೆಲವರು ಅಭಿಪ್ರಾಯ ಪಟ್ಟಿದ್ದಾರೆ.

ಜಿ.ಪಿ. ರಾಜರತ್ನಂ ಅವರು 'ಮುತ್ತು ಹವಳ' ಕೃತಿಗೆ ಬರೆದ ಮುನ್ನುಡಿಯಲ್ಲಿ 'ದಿ ಎಸ್ಸೆ' ಎಂಬ ಶೀರ್ಷಿಕೆಯನ್ನು ಬಳಸಿದ್ದಾರೆ ಅಲ್ಲಿಂದ ಈ 'ಎಸ್ಸೆ' ಎಂಬ ಇಂಗ್ಲೀಷ್ ಪದಕ್ಕೆ ಅನೇಕ ರೀತಿಯ ಪರ್ಯಾಯ ಪದಗಳನ್ನು ಅನೇಕ ಜನ ವಿದ್ವಾಂಸರುಗಳು ಸೂಚಿಸಿದ್ದಾರೆ. ಪ್ರಬಂಧ. ಶಿಥಿಲಬಂಧ. ಲಲಿತ ಪ್ರಬಂಧ. ಲಘುಪ್ರಬಂಧ. ಭಾವಪ್ರಬಂಧ, ಆತ್ಮೀಯ ಪ್ರಬಂಧ, ನಿಬಂಧ, ಬಂಧ, ಹರಟೆ, ಗದ್ಯಚಿತ್ರ, ಭಾವನಾಚಿತ್ರ, ಪ್ರಸಂಗ, ನ್ಯಾಸ; ಇತ್ಯಾದಿಯಾಗಿ ಕರೆದಿದ್ದಾರೆ. ಬಹುಶಃ ಬೇರಾವುದೇ ಸಾಹಿತ್ಯ ಪ್ರಕಾರಕ್ಕೆ ಇಷ್ಟೊಂದು ಪರ್ಯಾಯ ಪದಗಳನ್ನು ಸೂಚಿಸಿರುವುದು ಕಂಡುಬಂದಿಲ್ಲ."

' ಹಿಂದಿ'ಯಲ್ಲಿ 'ಎಸ್ಸೆ'ಗೆ ಪ್ರತಿಯಾಗಿ 'ನಿಬಂಧ' ಎಂದೇ ಇಟ್ಟುಕೊಂಡಿದ್ದಾರೆ. 'ಜಪಾನಿಯರು' ಇದಕ್ಕೆ 'ಸೂಯಿಹಿತ್ಸು' ಎಂದು ಕರೆಯುತ್ತಾರೆಂದೂ. ಅದರ ಅರ್ಥ. 'ಲೇಖನಿ ಹೋದಂತೆ ಹಿಂದೆ ಹೋಗುವುದು' ಎಂದು 'ಜಿ.ಪಿ. ರಾಜರತ್ನಂ' ಅವರು ತಿಳಿಸುತ್ತಾರೆ. ಪ್ರಬಂಧಕಾರನ ಮನಸ್ಥಿತಿಯ ಪ್ರತೀಕದಂತಿರುವ ಆ ಹೆಸರು ಉತ್ತಮವಾಗಿದೆ. ನಮ್ಮಲ್ಲಿ 'ಎಸ್ಸೆ'ಗೆ 'ಲಲಿತಪ್ರಬಂಧ' ಎಂಭ ಹೆಸರೇ ಸೂಕ್ತವೆಂದು ತೋರುತ್ತದೆ. ಚಿಕ್ಕ ಚಿಕ್ಕ ಚಿತ್ರಗಳು. ಹೆಚ್ಚು ಸಡಿಲ ಬಂಧದ ಬರವಣಿಗೆಗಳೂ ವಿಮರ್ಷೆ ಮತ್ತು ತತ್ವಜ್ಞಾನದ ವಿವೇಚನೆಗೆ ಸಂಬಂಧ ಪಟ್ಟವುಗಳು. ಲಲಿತ ಪ್ರಬಂಧದ ಆಯಾಮದಿಂದ ಹೊರತಾಗುತ್ತವೆ. 'ನಿಬಂಧ' 'ಪ್ರಬಂಧ' 'ಮಹಾಪ್ರಬಂಧ' ಈ ಎಲ್ಲಾ ಪದಗಳು ಎಸ್ಸೆ ಪದಕ್ಕೆ ಸಂವಾದಿಯಾದವುಗಳು. ಎಂದು ಕೆಲವರು ಭಾವಿಸಿರುವುದು ಕಂಡುಬರುತ್ತದೆ. ಆದರೆ ಇದು ಹಾಗಲ್ಲ. 'ನಿಬಂಧ.' 'ಮಹಾಪ್ರಬಂಧ'ಗಳು ವಸ್ತು ನಿಷ್ಠದಾಗಿರಬಹುದು. ಪ್ರಬಂಧವಾದರೂ ವ್ಯಕ್ತಿನಿಷ್ಠ . ಇವುಗಳು ಬೇರೆ ಬೇರೆ ಎಂಬುದನ್ನು ಸೂಚಿಸಿದ್ದಾನೆ. ನಾವು ಎಸ್ಸೆಗೆ ಪ್ರತಿಯಾಗಿ 'ಲಲಿತ ಪ್ರಬಂಧ' ಎಂಬ ಹೆಸರನ್ನು ಒಪ್ಪಿಕೊಂಡು, ಸೌಲಭ್ಯದ ದೃಷ್ಟಿಯಿಂದ ಪ್ರಬಂಧ ಎಂದೇ ಕರೆಯುತ್ತಿದ್ದೇವೆ.

<u>ಪ್ರಬಂಧ ಸಾಹಿತ್ಯದ ಬಗೆಗಳು</u> :-

ಪ್ರಬಂಧದಲ್ಲಿ ಕೆಲವು ಬಗೆಗಳನ್ನು ಹೆಸರಿಸಿದ್ದಾರಾದರೂ ಅವುಗಳಿಗಿರುವ ಭೇದಗಳನ್ನಾಗಲಿ, ವಿಶಿಷ್ಟ ಲಕ್ಷಣಗಳನ್ನಾಗಲೀ ಪ್ರತ್ಯೇಕಿಸಿ ಖಚಿತವಾಹಿ ತಿಳಿಸುವುದು ಅತ್ಯಂತ ಕಠಿಣವಾದ ಕಾರ್ಯ. 'ಎಸ್.ಮಂಜುನಾಥ' ಅವರು ತಮ್ಮ ಇಂಗ್ಲೀಷ್ ಪ್ರಬಂಧಗಳು ಎಂಬ ಗ್ರಂಥದಲ್ಲಿ ಪ್ರಬಂಧದ ಎರಡು ಬಗೆಗಳನ್ನು ತಿಳಿಸುತ್ತಾರೆ. ಗಂಭೀರ ಶೈಲಿಯ,ಗಹನ ವಿಷಯದ

ಪ್ರೌಢ ಪ್ರಬಂಧಗಳು ಒಂದು ಜಾತಿ, ಸುಲಭವೂ ಮನೋಹರವೂ ಆದ ಸಂಭಾಷಣಾ ಶೈಲಿಯಲ್ಲಿ ರಚಿತವಾದ ಸಂತೋಷವನ್ನುಂಟು ಮಾಡುವ ಲಲಿತ ಪ್ರಬಂಧಗಳು ಮತ್ತೊಂದು ಜಾತಿ, ಆದರೆ ನಾವು ಇಲ್ಲಿ ವಿಚಾರ ಮಾಡುತ್ತಿರುವುದು ಲಲಿತ ಪ್ರಬಂಧಗಳನ್ನು ಮಾತ್ರ.

ಆತ್ಮೀಯ ಪ್ರಬಂಧ, ವೈಚಾರಿಕ ಪ್ರಬಂಧ, ಹಾಸ್ಯಾತ್ಮಕ ಪ್ರಬಂಧ, ವರ್ಣನಾತ್ಮಕ ಪ್ರಬಂಧ, ಕಥಾನಾತ್ಮಕ ಪ್ರಬಂಧ, ಪತ್ರ ಪ್ರಬಂಧ, ವ್ಯಕ್ತಿಚಿತ್ರ, ಹರಟೆ ಇತ್ಯಾದಿಗಳು ಪ್ರಬಂಧ ಸಾಹಿತ್ಯದ ವಿವಿದ ಮಾದರಿಗಳಾಗಿವೆ. ವಾಸ್ತವವಾಗಿ ಈ ಎಲ್ಲಾ ಮಾದರಿಗಳಲ್ಲೂ ಪ್ರಬಂಧಕ್ಕೆ ಇರಬೇಕಾದ ಆತ್ಮೀಯತೆ, ನವುರಾದ ಹಾಸ್ಯ ಚಿಂತನೆ, ಕಲ್ಪನೆ, ಅನುಭವ, ಒಳ್ಳೆಯ ನಿರೂಪಣೆ, ಮುಂತಾದ ಲಕ್ಷನಗಳು. ಇದ್ದೇ ಇರುತ್ತದೆ. ಆದರೆ ಅವುಗಳಲ್ಲಿ ಸಾಮಾನ್ನಯವಾಗಿ ಸಮಪ್ರಮಾಣದಲ್ಲಿ ಈ ಗುಣಗಳಿದ್ದಲ್ಲೀ ಆ ಬರಹವನ್ನು ಉತ್ತಮವಾದ ಲಲಿತಪ್ರಬಂಧ ಎಂದಷ್ಟೇ ಇಟ್ಟುಕೊಳ್ಳಬಹುದು. ಕೆಲವು ಪ್ರಬಂಧಗಳಲ್ಲಿ ಪ್ರಬಂಧಕ್ಕೆ ಇರಬೇಕಾದ ಲಕ್ಷಣಗಳಲ್ಲಿ ಕೆಲವು ಅಧಿಕವಾಗಿಯು, ಕೆಲವು ಕಡಿಮೆಯಾಗಿಯು ಇರುತ್ತದೆ, ಯಾವ ಲಕ್ಷಣ ಒಂದು ಪ್ರಬಂಧದಲ್ಲಿ ಅಧಿಕವಾಗಿ ಕಂಡು ಬರುತ್ತದೆಯೋ ಅದಕ್ಕೆ ಆ ಪ್ರಧಾನ ಲಕ್ಷಣದ ಹೆಸರೇ ಶೀರ್ಷಿಕೆಯಾಗಿ ನಿಂತು ಬಿಡುತ್ತದೆ. ಉದಾಹರಣೆಗೆ ಒಂದು ಪ್ರಬಂಧದಲ್ಲಿ ಆತ್ಮೀಯತೆಯ ಗುಣ, ಉಳಿದೆಲ್ಲ ಲಕ್ಷಣಗಳಿಗಿಂತ ಅಧಿಕವಾಗಿದ್ದರೇ ಅದನ್ನು ಆತ್ಮೀಯ ಪ್ರಬಂಧ ಎಂದು ಕರೆಯುವುದು ವಾಡಿಕೆಯಾಗಿದೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಪ್ರಬಂಧಗಳು. ಅಪಾರವಾದ ಆತ್ಮೀಯ ಭಾವನೆಯಿಂದ ಕೂಡಿದ್ದು ಅವುಗಳನ್ನು ಆತ್ಮೀಯ ಪ್ರಬಂಧಗಳೆಂದು ಕರೆಯಬಹುದಾಗಿದೆ.

ಪ್ರಬಂಧಗಳಲ್ಲಿ ವೈಚಾರಿಕತೆಯೇ ಪ್ರಧಾನವಾಗಿದ್ದರೇ ಅವುಗಳನ್ನು ವಿಚಾರಾತ್ಮಕ ಪ್ರಬಂಧಗಳು ಅಥವಾ ವೈಚಾರಿಕ ಪ್ರಬಂಧಗಳು ಎಂದು ಕರೆಯಬಹುದು. ಚಿಂತನೆ ವಾಚಕನ ಆಲೋಚನೆಗೆ ಅನುವು ಮಾಡಿ ಕೊಡುವು ಇವುಗಳ ಗುಣ, ಇಲ್ಲಿ ಪ್ರತಿಪಾದ್ಯ ಮತ್ತು ಪ್ರತಿಪಾದಕ ಸಂಬಂಧವಿರುತ್ತದೆ. ಪುತಿನ ಅವರ 'ಈಚಲು ಮರದ ಕೆಳಗೆ' ಇದಕ್ಕೆ ಒಳ್ಳೆಯ ನಿದರ್ಶನ.

ಹಾಸ್ಯಾತ್ಮಕ ಪ್ರಬಂಧಗಳಲ್ಲಿ ಹೆಸರೇ ತಿಳಿಸುವಂತೆ ಹಾಸ್ಯದ ಅಂಶ ಪ್ರಧಾನವಾಗಿರುತ್ತದೆ. ವಿಷಯದ ಮೇಲೆ ನಗೆಯ ಹೊದಿಕೆಯಿದ್ದು ಸಾಹಿತ್ಯ ರಂಜನಾತ್ಮಕವಾಗುತ್ತದೆ. ಓದುಗರಿಗೆ ಆನಂದ ದೊರೆಯುತ್ತದೆ. ಇಂತಹ ಪ್ರಬಂಧಗಳನ್ನು ವಿನೋದ ಪ್ರಬಂಧಗಳೆಂದೂ ಕರೆಯುತ್ತಾರೆ. ಕಸ್ತೂರಿ ಗೊರೂರರ ಪ್ರಬಂಧಗಳಲ್ಲಿ ನಾವಿದನ್ನು ನೋಡಬಹುದು.

ಕಥನಾತ್ಮಕ ಪ್ರಬಂಧಗಳಲ್ಲಿ ಕಥಾಂಶ ಪ್ರಧಾನವಾಗಿರುತ್ತದೆ. ಆದರೆ ಕಥೆಯ ತಂತ್ರ ಇಲ್ಲಿರುವುದಿಲ್ಲಿ, ಕಥೆಯ ತಂತ್ರ ಕಂಡು ಬಂದರೆ ಅದು ಪ್ರಬಂಧವಾಗದೆ ಸಣ್ಣ ಕಥೆಯಾಗುತ್ತದೆ.

ಸಣ್ಣಕಥೆಯ ತಂತ್ರವಿಲ್ಲದ ಕಥಾಂಶ ಪ್ರಬಂಧದ ಉಳಿದೆಲ್ಲ ಲಕ್ಷಣಗಳೊಂದಿಗೆ ಸಾಂಗತ್ಯ ಪಡೆದಿದ್ದರೆ. ಅದು ಕಥನಾತ್ಮಕ ಪ್ರಬಂಧವಾಗುತ್ತದೆ. ಕಥನಾಂಶ ಸೇರುವುದರಿಂದ ಪ್ರಬಂಧಗಳೂ ಕೂತೂಹಲ ಮೂಲವಾಗಿ ಸ್ವಾರಸ್ಯ ಪೂರ್ಣವಾಗಿರುತ್ತದೆ. 'ರಾವಬಹುದ್ದೂರ್' ರವರ "ಮರೆಯದ ನೆನಪುಗಳು" ಸಂಕಲನದ ಕೆಲವು ಪ್ರಬಂಧಗಳು ಇದಕ್ಕೆ ಉತ್ತಮ ಉದಾಹರಣೆಗಳಾಗುತ್ತದೆ.

ವ್ಯಕ್ತಿ ಚಿತ್ರಗಳಲ್ಲಿ ವ್ಯಕ್ತಿಯೊಬ್ಬನ ವ್ಯಕ್ತಿತ್ವದ ನಿರೂಪಣೆಯೇ ಪ್ರಧಾನವಾಗಿರುತ್ತದೆ. ಐತಿಹಾಸಿಕ ವ್ಯಕ್ತಿ ಚಿತ್ರಗಳನ್ನು ಬರೆಯುವ ಲೇಖಕ ನಿಮ್ರಾತ್ಸ ಗುಣಗ್ರಾಹಿಯು ಪೂರ್ವಗ್ರಹ ಪೀಡನೆಯಿಂದ ಮುಕ್ತನೂ ಆಗಿರುಬೇಕಾಗುತ್ತದೆ. ವ್ಯಕ್ತಿಯ ಬಗ್ಗೆ ಸಾಕಷ್ಟು ವಿಷಯ ಸಂಗ್ರಹಣೆ ಮಾಡಿ ಆತನ ನಿಜವಾದ ಯೋಗ್ಯತೆಯನ್ನು ಪ್ರಾಮಾಣಿಕವಾಗಿ ಚಿತ್ರಿಸಬೇಕಾಗುತ್ತದೆ. ಇಲ್ಲಿ ವ್ಯಕ್ತಿ ಚಿತ್ರಗಾರ ಮುಖವಾಡ ಹಾಕಿದಂತಾಗುತ್ತದೆ. ಅವನು ಸ್ವತಂತ್ರವಾಗಿ ತನ್ನ ಮನಸ್ಸನ್ನು ಅತ್ತ ಇತ್ತ ಹರಿಯ ಬಿಡಲು ಸಾಧ್ಯವಾಗುವುದಿಲ್ಲ. ಕಲ್ಪನಾ ವಿಲಾಸಕ್ಕೂ ಅವಕಾಶ ಇರುವುದಿಲ್ಲ. ತಕ್ಕ ಮಟ್ಟಿಗೆ ಬರವಣಿಗೆ ಶಾಸ್ತ್ರೀಯವಾದ ಚೌಕಟ್ಟಿಗೆ ಬರಬೇಕಾಗುತ್ತದೆ ನಮ್ಮ ಮನಸ್ಸಿನ ಕಲ್ಪನೆಗೆ ವಿರೋಧವಾಗಿಲ್ಲದಿರುವುದು ಸಾಹಿತ್ಯದಲ್ಲಿ ಪ್ರಾಮಾಣಿಕತೆ ಎನಿಸುತ್ತದೆ. " ಎಚ್ಚೆಸ್ಕೆ" ಅವರ "ಎತ್ತರದ ವ್ಯಕ್ತಿಗಳು" ಅತ್ಯುತ್ತಮವಾದ ವ್ಯಕ್ತಿ ಚಿತ್ರಗಳನ್ನೊಳಗೊಂಡಿದೆ.

ಪತ್ರ ಪ್ರಬಂಧಗಳು ಪ್ರಬಂಧ ಸಾಹಿತ್ಯದ ಒಂದು ಆಕರ್ಷಕ ಭಾಗ. ಪತ್ರಗಳೆಲ್ಲವೂ ಪ್ರಬಂಧಗಳಾಗಲಾರವು, ಪ್ರಬಂಧಗಳು ಪತ್ರಮಾಧ್ಯಮದ ಮೂಲಕ ಅಭಿವ್ಯಕ್ತಗೊಂಡಿದ್ದರೆ ಅವು ಪತ್ರ ಪ್ರಬಂಧಗಳಾಗುತ್ತವೆ. ಇವು ಗಾತ್ರದಲ್ಲಿ ಚಿಕ್ಕವಾಗಿದ್ದು ಆತ್ಮೀಯತೆಯ ಗುಣದಿಂದ ಕೂಡಿ ಮನಸ್ಸಿಗೆ ವಿಷಯವನ್ನು ಪ್ರಿಯವಾಗಿ ಮುಟ್ಟಿಸುತ್ತದೆ. " ಸಿ.ಕೃಷ್ಣ" ಅವರ "ಮುಗುಧೆಯರ ಪತ್ರಗಳು" ಕೃತಿಯನ್ನು ಈ ಸಾಲಿನಲ್ಲಿ ನಿದರ್ಶನಾರ್ಥವಾಗಿ ನೆನೆಯಬಹುದು.

**ಎಂ. ಗೋವಿಂದ ಪೈಗಳು ಈ ಕೆಳಕಂಡಂತೆ ವಿಭಜಿಸುತ್ತಾರೆ.**

1. ಚಿತ್ರಪ್ರಬಂಧ
2. ವಿನೋದ ಪ್ರಬಂಧ
3. ಜ್ಞಾನ ಪ್ರಬಂಧ
4. ವಿಮರ್ಶನ ಪ್ರಬಂಧ
5. ಐತಿಹಾಸಿಕ ಪ್ರಬಂಧ
6. ಪ್ರಕೃತಿ ಪರವಾದ ಪ್ರಬಂಧ

7. ವೈಣಿಕ ಪ್ರಬಂಧ ಮೇಲಿನ ವಿಭಜನೆಯಲ್ಲಿ ವಿಮರ್ಶನ ಪ್ರಬಂಧ. ಐತಿಹಾಸಿಕ ಪ್ರಬಂಧ, ಪ್ರಕೃತಿ ಪರವಾದ ಪ್ರಬಂಧ, ಎಂಭ ಮೂರು ಬಗೆಗಳು ಮಾತ್ರ ಹೊಸದಾಗಿ ಕಂಡುಬರುತ್ತವೆ. ಉಳಿದವುಗಳು ನಮ್ಮ ಹಿಂದಿನ ವಿಭಜನೆಯಲ್ಲಿ ಕಂಡುಬರುತ್ತವೆ. ಚಿತ್ರ ಪ್ರಬಂಧಗಳು ವ್ಯಕ್ತಿ ಚಿತ್ರ ಪ್ರಬಂಧಗಳ ವಲಯದಲ್ಲೇ ಬರುತ್ತವೆ,

## ಪ್ರಬಂಧ ಸಾಹಿತ್ಯದ ಲಕ್ಷಣಗಳು:

ಪ್ರಬಂಧ ಕ್ಷೇತ್ರ ವಿಸ್ತಾರವೂ ವೈವಿಧ್ಯಮಯವೂ ಆದುದು. ಪ್ರಬಂಧ ಎಂದರೇನು ಎಂಬುದು ಹೇಗೆ ನಿರ್ದಿಷ್ಟವಾಗಿಲ್ಲವೊ ಹಾಗೆಯೇ ಪ್ರಬಂಧದ ಗುಣಲಕ್ಷಣಗಳು ನಿರ್ದಿಷ್ಟವಾಗಿಲ್ಲ. ಕೆಲವು ಸಾರಿ ಈ ಬಗ್ಗೆ ವಿದ್ವಾಂಸರುಗಳಲ್ಲಿ ಪರಸ್ಪರ ವಿರೋಧ ಅಭಿಪ್ರಾಯಗಳು ವ್ಯಕ್ತವಾಗಿರುವುದುಂಟು. ಪ್ರಸಿದ್ಧ ಆಂಗ್ಲ ಪ್ರಬಂಧಕಾರನಾದ 'ಜಾನ್ಸನ್ನ'ನ ಪ್ರಕಾರ ಪ್ರಬಂಧವು 'ಮನಸ್ಸಿನ ಸ್ವಚ್ಛಂದ ಲಹರಿ. ಕಟ್ಟುನಿಟ್ಟಿಲ್ಲದ ಮತ್ತು ಚಿಂತನೆಗೊಳಗಾದ ಸಣ್ಣಕೃತಿ. ನಿಯತವಾದ ಕ್ರಮಬದ್ಧ ರಚನೆಯಲ್ಲ' ಆದರೆ (the English essay and essayists) ಎಂಬ ಒಂದು ಉತ್ತಮ ಗ್ರಂಥವನ್ನು ಬರೆದ 'ಹ್ಯೂವಾಕರನು' ಅದು 'ಪರಿಮಿತವೂ ಕ್ರಮಬದ್ಧವೂ ಆದ ಬರವಣಿಗೆ' ಎಂದು ಅಭಿಪ್ರಾಯ ಪಡುತ್ತಾನೆ. ಪ್ರಬಂಧಗಳ ಇಂದಿನ ಅಚ್ಚುಕಟ್ಟುತನವನ್ನು ಗಮನಿಸಿದಾಗ ಹ್ಯೂವಾಕರನ ಹೇಳಿಕೆ ಸರಿ ಎನಿಸುತ್ತದೆ.

ಪ್ರಬಂಧದ ಬರವಣಿಗೆಯಲ್ಲಿ ಪರಿಮಿತ ಇರಬಹುದು ಆದರೆ ಅದಕ್ಕೆ ನಿಯಮವಿಲ್ಲ. ಪೊರಕೆಯಿಂದ ಪರಮೇಶ್ವರನವರೆಗೆ, ಜಲ್ಲಿಯಿಂದ ಜೀಮೂತವಾಹನದ ತನಕ. ಯಾವುದು ಬೇಕಾದರೂ ವಸ್ತುವಾಗಬಹುದು. ಘಟನೆ.ಸನ್ನಿವೇಶ.ಹಾಗೂ ವ್ಯಕ್ತಿ ಚಿತ್ರಗಳಾಗಬಹುದು. ತತ್ವಶಾಸ್ತ್ರದಂತಃ ಘನ ಗಂಭೀರ ವಿಷಯವಾಗಿರಬಹುದು. ನೀರ ಮೇಲಣ ಗುಳ್ಳೆ ಆಗಬಹುದು. ಹಿಮಾಲಯದ ಗೌರಿಶಂಕರವಾಗಬಹುದು .ಅಥವಾ ಇವೆಲ್ಲವನ್ನು ಒಳಗೊಂಡಿರಬಹುದು. ವಸ್ತುವನ್ನೆ ಕೇಂದ್ರ ಬಿಂದು ವನ್ನಾಗಿಟ್ಟುಕೊಂಡು ಪ್ರಬಂಧಕಾರನ ಮನಸ್ಸು ಅದರ ಸುತ್ತ ಸುತ್ತುತ್ತಿರಬೇಕು. ಮನಸ್ಸು ಬೇಕಾದರೂ ಸುತ್ತಿ ಬಳಸಬಹುದು. ಆದರೆ ಅದು ವಸ್ತುವನ್ನು ಮತ್ತೆ ಮತ್ತೆ ಸ್ಪರ್ಶಿಸುತ್ತಿರಬೇಕು. ಏಕೆಂದರೆ ವಸ್ತುವಿನ ಸಂಬಂಧವನ್ನು ಕಳೆದುಕೊಂಡು, ಅದರ ಗಡಿಮೀರಿ ಬಹಳ ದೂರ ಹೋದರೆ ಪ್ರಬಂಧಕ್ಕೆ ಬೇಕಾದ ಒಂದು ಅಚ್ಚುಕಟ್ಟುತನ ತಪ್ಪಿ ಪ್ರಬಂಧಕ್ಕೆ ಬದಲು ಹರಟೆಯಾಗಬಹುದು ವಸ್ತುವಿದ್ದರೂ ನಿರೂಪಣೆ ವ್ಯಕ್ತಿ ನಿಷ್ಠವಾಗಿರಬೇಕು. ಪ್ರಬಂಧಕಾರ ಅಭಿಪ್ರಾಯ ಮಂಡನೆಯಲ್ಲಿ ತನ್ನ ವ್ಯಕ್ತಿತ್ವದ ಮುದ್ರೆಯನ್ನು ಬಿತ್ತಬೇಕು. ನಿರೂಪಣೆ ಗದ್ಯದಲ್ಲಿ ಸರಳವಾಗಿ ಆಹ್ಲಾದಕಾರಿಯಾಗಿರಬೇಕು. ಓದಿದಷ್ಟು ಮತ್ತೆ ಮತ್ತೆ ಓದುವಂತೆ ಭಾವನೆಗಳಲ್ಲಿ ಆತ್ಮೀಯತೆ

ಇರಬೇಕು. " ಎಂಬ ಹಟವಾಗಲಿ. ನೀರಸ ತತ್ವ ಭೋಧನೆಯಾಗಲಿ.ಒಣತರ್ಕವಾಗಲಿ ವಿಷಯ ಪ್ರೌಡಿಮೆಯಾಗಲಿ ಇರಬಾರದು. ಕಡಂಗೋಡ್ಲು ಶಂಕರಭಟ್ಟರು ಹೇಳುವಂತೆ "ಸರಳತೆ ಮೃದು ಪರಾಮರ್ಶೆ. ಅಭಿಮುಖೀಕರಣ ಶಕ್ತಿ ಪ್ರಬಂಧದ ಮುಖ್ಯ ಗುಣವಾಗಿರಬೇಕು ಪ್ರಬಂಧವನ್ನು ಓದಿದಾಗ ವಾಚಕರಿಗೆ ಒಂದು ಬಗೆಯ ತಿಳಿಯಾದ ಉಲ್ಲಾಸ ದೊರೆಯುವಂತಾಗಬೇಕು ಮುಂಜಾನೆಯಸಮಯದಲ್ಲಿ ಮಲ್ಲಿಗೆಯ ತೋಟದಲ್ಲಿ ಸಂಚರಿಸಿದಾಗ ಉಂಟಾಗುವ ಪರಿಮಳದ ಕಂಪಿನ ಇಂಪಾದ ಅನುಭವದಂತೆ ಹಿತಕರವಾಗಿರಬೇಕು ಸುಖಕರವಾಗಿರಬೇಕು"

ಪ್ರಬಂಧ ಆತ್ಮ ವಿನೋದಿ. ಅದು ಭಾವಗೀತೆಯಷ್ಟೇ ಪರಿಣಾಮಕಾರಿ ವಾಸ್ತವವಾಗಿ ಪ್ರಬಂಧ ಭಾವಗೀತೆಗೆ ಹತ್ತಿರದ ಸಂಬಂಧ ಉತ್ತಮ ಭಾವನೆಗಳ ಸರಳ ವಕ್ರೋಕ್ತಿಗಳು. ವ್ಯಂಗ್ಯ ವಿಡಂಬನೆಗಳು ಅಲ್ಲಿರುವಂತೆ ಇಲ್ಲಿಯು ಕಂಡು ಬರುತ್ತದೆ. ತೀವ್ರಗತಿಯಲ್ಲಿ ಲಯಬದ್ಧತೆಯಲ್ಲು ಪ್ರಬಂಧವು ಭಾವಗೀತೆಗಿಂತ ಕೆಳಮಟ್ಟದ್ದಾದರೂ ಎರಡಕ್ಕೂ ಬಲುಮಟ್ಟಿಗೆ ಸಾದೃಶ್ಯವಿದೆ. ಪ್ರಬಂಧವೆನ್ನುವು ಮಂದಶೃತಿಯ ಭಾವಗೀತೆ'.ಎನ್ನುವ ಮಾತು ಸಹ ಇಂಥ ಅರ್ಥ ಕೊಡುತ್ತದೆ. ಹರಟೆಗಾರನು ಒಬ್ಬಕವಿ 'an essay is a lyric in prose' ಎನ್ನುವ ಮಾತು ಸಹ ಇಂಥದೇ ಅರ್ಥವನ್ನು ಕೊಡುತ್ತದೆ. 'ಹರಟೆಗಾರನು ಒಬ್ಬ ಕವಿ" ಎನ್ನುವ 'ಎಚ್ಚೆಸ್ಕೆ' ರವರ ಮಾತು ಅರ್ಥಪೂರ್ಣ. ಸಾಹಿತ್ಯದಲ್ಲಿ ಸಣ್ಣ ಕಥೆಯಂತೆ ಪ್ರಬಂಧವು ಆಕೃತಿಯಲ್ಲಿ ಚಿಕ್ಕದು ಆದರೆ ನಿರೂಪಣೆಯ ರೀತಿಯಲ್ಲಿ ಅವೆರಡಕ್ಕೂ ಸ್ಪಷ್ಟವಾದ ವ್ಯತ್ಯಾಸವಿದೆ. ಸಣ್ಣಕಥೆ ವಸ್ತುನಿಷ್ಟವಾದರೆ ಪ್ರಬಂಧ ಭಾವನಿಷ್ಠವಾಗಿ ಮತ್ತು ಅದು ಹೆಚ್ಚು ಚಿಂತನಾತ್ಮಕವಾಗುತ್ತದೆ.

ಪ್ರಬಂಧಕಾರ ಯಾವುದೇ ವಸ್ತುವನ್ನು ಕುರಿತು ಪ್ರಸ್ತಾಪಿಸಿದರೂ ಅದರಲ್ಲಿ ಅವನ ವ್ಯಕ್ತಿತ್ವವನ್ನು ಗುರುತಿಸಬಹುದು ಪ್ರಬಂಧದಲ್ಲಿ ಅವನು ಅಂತರಂಗಕ್ಕೆ ಕನ್ನಡಿ ಹಿಡಿಯುತ್ತಾನೆ. ತನ್ನನ್ನು ತಾನು ಬರೆದುಗೊಳ್ಳುತ್ತಾನೆ. ವಸ್ತುವೆಂಬ ಪರದೆಯ ಮೇಲೆ ಸ್ವಾನುಭಾವದ ಚಿತ್ರಗಳನ್ನು ಪ್ರದರ್ಶಿಸುತ್ತಾನೆ. ಆದ್ದರಿಂದ ಈ ನಿಟ್ಟಿನಲ್ಲಿ ನೋಡಿದಾಗ ಪ್ರಬಂಧ ಆತ್ಮ ವೃತ್ತದ ಸಂಕ್ಷಿಪ್ತ ರೂಪ ಅಡಿ ಟಿಪ್ಪಣಿ ಎಂಬ ಕೆ. ಆರ್. ಮಹರ್ಷಿಯವರ ಮಾತು ಸತ್ಯವೆನಿಸುತ್ತದೆ. ಹೀಗೆ ವಕಾರ ವಸ್ತುವೊಂದನ್ನು ಆಧಾರವಾಗಿಟ್ಟುಕೊಂಡು ತನ್ನನ್ನು ತಾನು ಅಭಿವ್ಯಕ್ತಗೊಳಿಸಿಕೊಳ್ಳುವಾಗ ಆತ್ಮೀಯತೆಯ ಗುಣ ಅತ್ಯಗತ್ಯವಾಗುತ್ತದೆ. ಇಲ್ಲವಾದರೆ ಅವನ ಅಭಿಪ್ರಾಯ ವಾಚಕನಿಗೆ ಅಷ್ಟಾಗಿ ಹಿಡಿಸದೇ ಅವನು ಪ್ರಬಂಧಕಾರನ ಮಾತಿಗೆ ಕಿವಿಗೊಡದೆ ಹೋಗಬಹುದು. ಆದ್ದರಿಂದ ಅವನು ವಾಚಕನನ್ನು ತನ್ನ ವಶಕ್ಕೆ ತೆಗೆದುಕೊಂಡು ಸ್ನೇಹಿತನಂತೆ ನಡೆದುಕೊಂಡು ಕಾಂತಾಸಮ್ಮಿತದಂತೆ ಭೋದಿಸಬೇಕಾಗುತ್ತದೆ. ಈ ಭೋಧನೆ ನೇರವಾಗಿರದೆ. ಧ್ವನಿತವಾದದಂತೆ ಭೋದಿಸಬೇಕಾಗುತ್ತದೆ. ಈ ಭೋಧನೆ ನೇರವಾಗಿರದೇ ಧ್ವನಿತವಾದಷ್ಟು ಪ್ರಬಂದ ಉತ್ತಮವಾಗುತ್ತದೆ. ಇದಕ್ಕೆ ಒಳ್ಳೆಯ

ನಿರೂಪಣಾಶಕ್ತಿ ಅತ್ಯಗತ್ಯ ಇದನ್ನೇ ನಾವು ಶೈಲಿ ಎನ್ನುವುದು ಶೈಲಿ ಪ್ರಬಂಧಕಾರನನ್ನು ಕಾಪಾಡುವ ರಕ್ಷಾಕವಚ.ವಿಷಯದ ಬತ್ತಳಿಕೆ ಬರಿದಾದಾಗ ಕೊಡುವ ರಕ್ಷಾ ಕವಚ. ಉತ್ತಮ ಶೈಲಿಯನ್ನು ಹೊಂದಿರುವ ಪ್ರಬಂಧಕಾರ ಎಂಥದೇ ನೀರಸ ವಿಷಯವನ್ನಾದರೂ ಆಕರ್ಷಕವಾಗಿ ಅಪ್ರಯಾಮಾನವಾಗುವ ಹಾಗೆ ಚಿತ್ರಿಸಬಲ್ಲ ಸರಳವಾಗಿ ಸುಂದರವಾಗಿ ಸ್ಪಷ್ಟವಾಗಿ ರೂಪಿಸುವು ಪ್ರಬಂಧ ಶೈಲಿಯ ಮುಖ್ಯ ಲಕ್ಷಣಗಳಲ್ಲಿ ಬೇರಾವುದೊಂದು ಕಡಿಮೆಯಾದರು ಅವನ ಒಳ್ಳೆಯ ಪ್ರಬಂಧಕಾರನಾಗಿ ಅವನು ಒಳ್ಳೆಯ ಪ್ರಬಂಧಕಾರನಾಗುವುದಕ್ಕೆ ಸಾಧ್ಯವೇ ಇಲ್ಲ.

ನವುರಾದ ಹಾಸ್ಯ ಪ್ರಬಂಧದಲ್ಲಿ ಇರಬೇಕಾದ ಮುಖ್ಯ ಅಂಶಗಳಲ್ಲಿ ಒಂದು. ಇದು ವಿಷಯದ ಹೊರೆಯನ್ನು ಹಗುರ ಮಾಡುವುದಲ್ಲದೇ.ಬೇಸರಿಕೆಯನ್ನು ನೀಗಿ ಮನಸ್ಸಿಗೆ ಉಲ್ಲಾಸವನ್ನುಂಟು ಮಾಡುತ್ತದೆ. ಪ್ರಬಂಧಕಾರನ ಅಭಿಪ್ರಾಯವನ್ನು ಸುಲಭವಾಗಿ ಗ್ರಹಿಸುವುದಕ್ಕೆ ಪೋಷಕವಾಗುತ್ತದೆ.

ಅವನಿಗೆ ಒಂದು ಬಗೆಯ ತೃಪ್ತಿಯನ್ನು ಒದಗಿಸಿಕೊಡುತ್ತದೆ. ಪ್ರಬಂಧ ಸಾಹಿತ್ಯದ ವಿಶೇಷ ಗುಣವಾದ ಈ ಹಾಸ್ಯ ಹಿತಮಿತವಾಗಿ 'ತಿಳಿಹಾಸ್ಯ ಎನ್ನುವಂತಿರಬೇದೆ ಹೊರತು ಹುಚ್ಚು ಹಾಸ್ಯವಾಗಬಾರದು

ವಾದ ವೈಖರಿ ಪ್ರಬಂಧವನ್ನು ಪರಿಣಾಮಕಾರಿಯಾಗಿಸುವ ಮತೊಂದು ಲಕ್ಷಣವಾಗಿದೆ. 'Alexander smith' ಹೇಳುವಂತೆ ಪ್ರಬಂಧಕಾರನ ಕೆಲಸ ವಸ್ತು ನಿರ್ಮಿತಿಯಲ್ಲ, ಆದರೆ ನಿರ್ಮಿತ ವಸ್ತುವಿನ ಮೇಲೆ ಹೂಡುವ ತನ್ನದೇ ರೀತಿಯ ವಾದವಿವಾದದ ವೈಖರಿ, ಇದರಿಂದ ಪ್ರಬಂಧ ಅಧ್ಯಯನ ಕುತೂಹಲಕಾರಿಯ ಸ್ವಾರಸ್ಯಪೂರ್ಣವೂ ಆಗಿ ಕಂಡುಬರುತ್ತದೆ. ಚರ್ಚೆ ಮತ್ತು ಸಂಭಾಷಣೆಗಳು ಇದಕ್ಕೆ ಸಹಾಯವಾಗುತ್ತದೆ. ಲೇಖಕರ ಅಭಿಪ್ರಾಯದ ಪ್ರಕಾರ ಪ್ರಬಂಧ ಆಕೃತಿಯಲ್ಲಿ ಕಿರಿದಾದ ಒಂದು ಗದ್ಯ ಪ್ರಕಾರ ಅದರ ವ್ಯಾಪ್ತಿ ಸಾಧ್ಯವಾದ ಮಟ್ಟಿಗೂ ಎರಡು ಪುಟಗಳಿಗಿಂತ ಚಿಕ್ಕದಾಗಿರಲಿ ಇಪ್ಪತ್ತೈದು ಪುಟಗಳಿಗಿಂತ ಹೆಚ್ಚಾಗಿ ಇರಬಾರದು ಅದು ಮಾರ್ದವತೆ ಮತ್ತು ಲಲಿತ ಗುಣಗಳಿಂದ ಕೂಡಿದ್ದು ಆತ್ಮ ವಿನೋದಿಯಾಗಿರಬೇಕು ಅದರಲ್ಲಿ ವಿಮರ್ಶಕ ಪ್ರಜ್ಞೆ ಇದ್ದು ಅದು ಜೀವನದ ಮೇಲೆ ಬೆಳಕು ಚೆಲ್ಲುವಂತಿರಬೇಕು ಆರಂಭ ಮತ್ತು ಮುಕ್ತಾಯ ಆಕರ್ಷಕವಾಗಿರಬಹುದು ಇದು ಒಳ್ಳೆಯ ಪ್ರಬಂಧದ ಲಕ್ಷಣ ಮೊದಲ ವಾಕ್ಯದಲ್ಲಿ ಪ್ರಬಂಧಕಾರ ವಾಚನನ್ನು ಸೆರೆಹಿಡಿಯಬೇಕು ಕೆಲವರು ಒಳ್ಳೆಯ ನಾಣ್ಣುಡಿ ಅಥವಾ ಆವತರಣಿಕೆಯಿಂದ ಪ್ರಬಂಧಗಳನ್ನು ಆರಂಭಿಸುತ್ತಾರೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಪ್ರಬಂಧಗಳ ಪ್ರಾರಂಬ ಸಾಮಾನ್ಯವಾಗಿ ಹೆಚ್ಚು ಆಕರ್ಷಕವಾಗಿರುತ್ತದೆ. ವಿಷಯದ ಮೇಲಿನ ಹಿಡಿತ ಉತ್ತಮವಾದ ಕಲ್ಪನಾ ಸಾಮರ್ಥ ಸ್ವಾಭಾವಿಕವಾದ ಚಮತ್ಕಾರ ಮತ್ತು ಸಮೃದ್ಧವಾದ ಅನುಭವಗಳು ಪ್ರಬಂಧಕ್ಕೆ ಶಕ್ತಿ ತುಂಬುತ್ತದೆ. ' ಜಿ. ಪಿ. ರಾಜ ರತ್ನಂ' ಅವರು ಹೇಳುವಂತೆ '

ಸುಟಿಯಾದ ಎಸ್ಸೆ ಕಾದಂಬರಿಯಂತೆ ಮನರಂಜನೆ ಮಾಡಬೇಕು ಕವಿಯಂತೆ ಕಾವುಗೊಡಿರಬೇಕು ಗ್ರಂಥದಂತೆ ಗ್ರಂಥಿಯನ್ನು ಪಡೆದಿರಬೇಕು ನಾಡಕದಂತೆ ನೇರವಾಗಿ ಮನಸ್ಸು ಬಿಚ್ಚಿ ಮಾತನಾಬೇಕು ನೃತ್ಯದಂತೆ ಶಾಸ್ತ್ರಿಯವಾದರೂ ಹಾಸ್ಯದಲ್ಲಿ ಹಾಸ್ಯವನ್ನು ಬೆರಸಿ ಒಂದು ಬಳುಕಬೇಕು ಪ್ರಬಂಧ ರಚನೆಯಲ್ಲಿ ಹೆಚ್ಚು ಸ್ವಾತಂತ್ರ್ಯ ಉಂಟು ಇಲ್ಲಿ ಅತಿಯಾದ ನಿಯವಗಳ ತಂತ್ರಗಳ ಕಟ್ಟಿಲ್ಲ ಕಾದಂಬರಿಯ ವಿಷಯದಲ್ಲಿ ನಿಜವಾದದ್ದು ಪ್ರಬಂಧವೂ ಕೂಡ ಯಾವುದೇ ವಿಷಯದ ಬಗ್ಗೆ ಏಮಲ್ಲಾ ಹೇಳುವ ಸಾಧ್ಯತೆಯುಳ್ಳ ಒಂದು ಸಾಹಿತ್ಯ ತಂತ್ರ ಒಂದು ಮಾತಿನಲ್ಲಿ ಹೇಳುವುದಾದರೇ ಸಾಹಿತ್ಯದ ಎಲ್ಲಾ ಪ್ರಕಾರಗಳ ಪರಿಣಾಮವನ್ನು ಬಲ್ಲವನು ಎಸ್ಸೆ ಒಂದರಲ್ಲೇ ಚಿಮ್ಮಿಸಿಕೊಂಡು ಹೋಗುವುದು ಸಾಧ್ಯ ಎನ್ನುತ್ತಾರೆ ಜಿ. ಪಿ. ರಾಜ ರತ್ನಂ ಹೀಗಾಗಿ ಪ್ರಬಂಧ ಪ್ರಕಾರ ಲೇಖಕನ ಅಭಿವ್ಯಕ್ತಿಯ ಸುಲಭ ಮಾಧ್ಯಮ ಮಾತ್ರವಲ್ಲದೇ ಪ್ರಬಲ ಮಾಧ್ಯಮವೂ ಹೌದು ಇದರ ಉಪಯೋಗವೂ ಹೆಚ್ಚು ಒಳ್ಳೆಯ ಪ್ರಬಂಧ ಜನಮನವನ್ನು ತಿದ್ದಬಲ್ಲದು ಬುದ್ಧಿಯನ್ನು ಪ್ರಚೋಧಿಸಬಲ್ಲದು ಆನಂದವನ್ನು ಜ್ಞಾನವನ್ನು ಒಟ್ಟಿಗೇ ಒದಗಿಸಬಲ್ಲದು. ' ಶಂಕರಭಟ್ಟರು' ತಮ್ಮ 'ವಾಙ್ಮಯ ತಪಸ್ಸು' ಎಂಬ ಗ್ರಂಥದಲ್ಲಿ ಹೇಳಿರುವಂತೆ ಒಟ್ಟಿನಲ್ಲಿ ಮೇಲೆ ಅನುಭವಿಗಳಿಗೂ ಅನುಭಾವ್ಯಗಳಿಗೂ ಮಧ್ಯವರ್ತಿಗಳಾಗಿದ್ದು ನಡುವೆ ಸಾಮರಸ್ಯದ ಸಮಕಟ್ಟನ್ನು ಉಂಟು ಮಾಡುವುದೇ ಪ್ರಬಂಧ ಲೇಖಕರ ಉದ್ದೇಶವಾಗಿರುವುದು. ಅವರ ಲೇಖನಿಯ ಸಮಾಜದ ಸಕಲ ಪಾರ್ಶ್ವಗಳನ್ನು ಅಭಿಯೋಗಿಸುವುದು ಅದರ ತುದಿಯಲ್ಲಿ ನಗೆನೋವುಗಳಿರಡು ಅರಳುತ್ತವೆ. ಆದರೆ ಅವುಗಳ ಪತ್ರಪಟಲಗಳು ನಾನಾವರ್ಣಮಯವಾಗಿದ್ದು ಒಂದರ ಕಾಣಿಕೆ ಇನ್ನೊಂದರಲ್ಲೀ ಹೊಂದಿಕೊಂಡಿರುವಂತೆ ಗೋಚರಿಸುವುದು ಉಂಟು ಲೇಖಕನ ಆಸೆ ಆಕಾಂಕ್ಷೆಗಳು ಈ ಆಯಾಮದಲ್ಲಿ ಚಿತ್ರಗೊಳ್ಳುತ್ತವೆ. ಇದಕ್ಕೆಲ್ಲ ಪ್ರಬಂಧಕಾರನ ಪ್ರತಿಭೆಗೆ ಚಾಲಕ ಶಕ್ತಿಯಾಗಿ ಕೆಲಸ ನಿರ್ವಹಿಸುತ್ತದೆ. ಪ್ರತಿಭೆಗೆ ಅನುಗುಣವಾಗಿ ಪ್ರಬಂಧ ಸೃಷ್ಟಿಗೊಳ್ಳುತ್ತದೆ.ಅವನ ದೃಷ್ಟಿ ಬಹಳ ಮಟ್ಟಿಗೆ ವಕ್ರ.

ಪ್ರಬಂಧಕಾರನ ದಾರಿ ಹೇಗೆ ವಕ್ರವೊ ಹಾಗಿಯೊ ವಿಶಿಷ್ಟ ಕೂಡ ಎಲ್ಲರಿಗೂ ಸಾಮನ್ಯ ತಾತ್ಸರ ಪ್ರಾಣಿಯಾದ ಎಮ್ಮೆಇವನಿಗೆ ಗೌರವ ಭಾಜನವಾದ ದೇವತೆ ಕಾಯಿಲೆಗಳು ಸಮಾಜಕ್ಕೆ ಶಾಪವಾದರೇ ಇವನಿಗೆ ಅವೆ ವರ ಲೋಕವೆಲ್ಲ ಮಲಗಿದಾಗ ಇವನಿಗೆ ಎಚ್ಚರ ಲೋಕ ಎಚ್ಚರಗೊಂಡಾಗ ಇವನಿಗೆ ನಿದ್ರೆ ಜಗತ್ತಾ ಅಳುವಾಗ ನಗುವ ಪುಣ್ಯಾತ್ಮ ಇವನು ಆಲಸ್ಯ ಸೋಮಾರಿತನ ಪ್ರಗತಿಯ ಕಂಟಕಗಳಾದರೆ ಇವನಿಗೆ ಅವು ಸಾಧನೆಯ ಸಂಕೇತ ಎಷ್ಟೋ ಸಾರಿ ಇವನು ಹೀಗೆ ವಿಚಿತ್ರ ಪ್ರಾಣಿ ಆದರೂ ವಾಸ್ತವವಾದಿ – ಮಾತ್ರವಲ್ಲ ವಿಜ್ಞಾನಿ ಕೂಡ ಇವನು ಕಲ್ಪನಾ ಜೀವಿಯೂ ಹೌದು ಇವನ ಕಲ್ಪನೆಗಳಿಗೆ ಮಿತಿಯಿಲ್ಲ ಆದಿ ಅಂತ್ಯಗಳಿಲ್ಲ ಅವು ಶಶಿ. ರವಿ.

ನಭ ತಾರಕೋಟಿಗಳನ್ನು ದಾಟಿ ಸಂಚರಿಸುತ್ತದೆ. ಆದರೆ ಅವುಗಳ ಗುರುತ್ವಾಕರ್ಷಣ ಶಕ್ತಿ ಇರುವುದು ಇಲ್ಲೇ ನೆಲದಲ್ಲೇ ವಾಸ್ತವಿಕತೆಯ ಮನೋಮಂದಿರದಲ್ಲೇ ಅವು ಹಗಲುಗನಸಿನ ಮರೀಚಿಕೆಗೆ ಗಾಳಿಯಲ್ಲಿ ಹಾರಿಹೋಗುವವೂ ಅಲ್ಲ ಭಾವೋಪಯೋಗಿಗಳಿಂತೂ ಅಂತೆಯೋ ಲೋಕೋಪಯೋಗಿಗಳು ಹೌದು ಭಾವನೆಯಲ್ಲಿ ಚಿಂತನೆ ಕಾವು ಕೊತಿರುತ್ತದೆ.

**ಕನ್ನಡದ ಪ್ರಮುಖ ಪ್ರಬಂಧಕಾರರು:-**

ಪ್ರಬಂಧ ಸಾಹಿತ್ಯ ನಮಗೆ ಇಂಗ್ಲೀಷ್ ಪ್ರಬಂಧದಿಂದ ಬಂದಿತಾದರೂ ಇದರ ಮೂಲಭೂತ ರೂಪ ನಮ್ಮಲ್ಲಿಯು ಇತ್ತು ಪುರಾಣಗಳಲ್ಲಿ ಕಥಾಖ್ಯಾಯಿಕೆಗಳಲ್ಲಿ ಕಾವ್ಯನಾಟಕಗಳಲ್ಲಿ ಕಾವ್ಯಗಳಿಗೆ ಬರೆದ ವ್ಯಾಖ್ಯಾನಗಳಲ್ಲಿ ಟೀಕೆ ಟಿಪ್ಪಣಿಗಳಲ್ಲಿ ಪ್ರಬಂಧಕ್ಕೆ ಸಂಬಂಧಿಸಿದಂತಹ ರೂಪಾಂಶಗಳು ಕಂಡುಬರುತಿರುದ್ದವು. 'ಪ್ರಬಂಧ ಎಂಬ ಹೆಸರನ್ನು ಸಹ ಬೇರೆ ಬೇರೆ ಅರ್ಥದಲ್ಲಿ ಸಾವಿರ ವರ್ಷಗಳಿಂದಲೂ ಕನ್ನಡದಲ್ಲಿ ಬಳಸುತ್ತಾ ಬಂದಿದ್ದಾರೆ ಆದರೆ ನಮ್ಮಲ್ಲಿದ್ದ ಪ್ರಬಂಧಗಳ ಲಕ್ಷಣಕ್ಕೂ ಈಗಿನ ಪ್ರಬಂಧಗಳ ಲಕ್ಷಣಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ನಮ್ಮಲ್ಲೂ ಮಣ್ಣಿದೆ ಅಂದ ಮಾತ್ರಕ್ಕೆ ಮಾರ್ಕೆಟ್ಟಿನಲ್ಲಿರುವ ಮಡಕೆಯ ಅದರ ಅಂದವೂ ನಮ್ಮದೇ ಎಂದು ಹೇಳಲು ಸಾಧ್ಯವಿಲ್ಲ ಬೆಳೆದು ಬಂದವು ಎಂಬುದು ಗಟ್ಟಿಸಂಗತಿ ಮಹಾಕಾವ್ಯಗಳ ಅಥವಾ ಈ ಬಗ್ಗೆಯ ಕೃತಿಗಳ ಮಂಪರಿನಿಂದ ಬಿಡಿಸಿಕೊಂಡು ಸಣ್ಣ ಕಥೆ ಸಣ್ಣ ನಾಟಕ ಪ್ರಬಂಧ ಹರಟೆ ಮುಂತಾದ ಮಿನಿಸಾಹಿತ್ಯ ಪ್ರಕಾರಗಳ ಕಡೆಗೆ ನಮ್ಮವರನ್ನು ವಾಲುವಂತೆ ಮಾಡಿದ್ದು ಇಂಗ್ಲೀಷ್ ಸಾಹಿತ್ಯ

ಹೀಗೆ ಇಂಗ್ಲೀಷ್ ನಿಂದ ಕನ್ನಡಕ್ಕೆ ಹರಿದು ಬಂದ ಪ್ರಬಂಧ ಸಾಹಿತ್ಯವು ಕನ್ನಡದಲ್ಲಿ ಒಳ್ಳೆಯ ಸ್ಥಾನನನ್ನು ಪಡೆದುಕೊಂಡಿತು ಪ್ರಬಂಧ ಸಾಹಿತ್ಯವನ್ನು ಹಲವಾರು ಕನ್ನಡದ ಪ್ರಸಿದ್ಧ ಲೇಖಕರುಗಳು ಕೃಷಿ ಮಾಡುವ ಮೂಲಕ ಅದರ ಮೌಲ್ಯವನ್ನು ಹೆಚ್ಚಿಸಿದರು.. ಈ ಮೂಲಕ ಪ್ರಬಂಧ ಸಾಹಿತ್ಯ ಇಂದಿಗೂ ಕೂಡ ಉಳಿದುಕೊಂಡು ಬಂದಿದೆ. ಅಂತಹ ಪ್ರಮುಖ ಕನ್ನಡ ಲಲಿತ ಪ್ರಬಂಧ ಕಾರರನ್ನು ಈ ಕೆಳಕಂಡತೆ ಸಂಕ್ಷಿಪ್ತವಾಗಿ ಪರಿಚಯ ಮಾಡಿಕೊಳ್ಳಬಹುದು.

ಎ, ಎನ್, ಮೂರ್ತಿ ರಾವ್. :-

ಕನ್ನಡ ಪ್ರಬಂಧ ಸಾಹಿತ್ಯಕ್ಕೆ ಮೌಲ್ಯ ತಂದು ಕೊಟ್ಟವರಲ್ಲಿ ಮೂರ್ತಿರಾವ್ ರವರು ಮುಖ್ಯರು ಬದುಕಿನ ವಿವಿಧ ವ್ಯಾಪಾರಗಳಿಗೆ ಹೃದಯ ಸ್ಪಂದಿಸಿ ಹೊರ ಹೊಮ್ಮಿರುವ ವೈವಿಧ್ಯಮಯವಾದ ಅವರ ಪ್ರಬಂಧಗಳು ಕಲಾತ್ಮಕ ಆತ್ಮವೃತ್ತಾಂತಗಳಾಗಿವೆ. ಬುದ್ಧಿ ಮತ್ತು ಹೃದಯಗಳ ಬೆಸಗೆಯೂ ವಿಚಾರವಂತಿಕೆ ಮತ್ತು ಆತ್ಮಿಯತೆಯ ಗುಣವೂ ಇಲ್ಲಿ ಕಂಡುಬರುತ್ತದೆ. ವ್ಯಾಪಕವಾದ ಅಧ್ಯಯನ ದಟ್ಟವಾದ ಅನುಭವ ಸೂಕ್ಷ್ಮ ಆಲೋಚನಾ ಸಾಮರ್ಥ್ಯ ಒಳ್ಳೆಯ ವಿಶ್ಲೇಷಣಾ ಶಕ್ತಿ ಅನನ್ಯವಾದ ಮಾನವೀಯತೆ ಉತ್ತಮ ವರ್ಣನ ಕಲೆ ಮತ್ತು ಮೋಹಕ ಕಲ್ಪನೆಯಿಂದ ಕೂಡಿರುವ ಇವರ ಪ್ರಬಂಧಗಳೂ ಕನ್ನಡ ಸಾಹಿತ್ಯದಲ್ಲಿ ಯಾವತ್ತೂ ಅಳಿಯದ ಆಸ್ತಿ.

ಮೂರ್ತಿರಾವ್ ರವರು ' ಹಗಲುಗನಸುಗಳು' ( 1937–1963 ) 'ಅಲೆಯುವ ಮನ '( 1972–1959 ) ಮತ್ತು 'ಮಿನುಗುಮಿಂಚು' ( 1977–1968–1972 ) ಎಂಬ ಮೂರು ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವು ಮೇಲೆ ಹೇಳಿರುವ ಇಸವಿಗಳಲ್ಲಿ ದ್ವಿತಿಯ ಮತ್ತು ತೃತೀಯ ಮುದ್ರಣ ಗಳನ್ನು ಕಂಡಿವೆ. ಅಲ್ಲದೇ ' ಸಂಕಲಿತ ಪ್ರಬಂಧಗಳು ' ಎಂಬ ಪ್ರಬಂಧ ಸಂಕಲನವನ್ನು ಅನಂತರದ ದಿನಗಳಲ್ಲಿ ಹೊರತರುತ್ತಾರೆ. ಒಟ್ಟಾರೆ ಅವರ ಪ್ರಬಂಧಗಳು ಹಾಸ್ಯ ಪ್ರಜ್ಞೆಯನ್ನು ಒಳಗೊಂಡಿದ್ದು ಓದುಗನಿಗೆ ಖುಷಿಕೊಡುತ್ತದೆ.

ಪು. ತಿ ನರಸಿಂಹಚಾರ್:-

ಪು. ತಿ. ನರಸಿಂಹಚಾರ್ ಅವರು 'ಕನ್ನಡದ ವಿಚಾರಾತ್ಮಕ ಪ್ರಬಂಧಗಳ ಪಿತಾಮಹ' ಜೀವನವನ್ನು ಗಂಭಿರ ಜಿಜ್ಞಾಸೆಗೊಡ್ಡಿ. ಅದನ್ನು ಹೃದ್ಯವಾಗಿ ಹೇಳಿದ ಹೆಚ್ಚುಗಾರಿಕೆ ಇವರದು ಉತ್ತಮ ಕವಿಯಾಗಿ ಖ್ಯಾತಿರಾಗಿದ್ದ ಇವರು ತಮ್ಮ ಪ್ರಬಂಧಗಳ ಮೂಲಕ ಉತ್ತಮ ಗದ್ಯಕಾರಕೂ ಆದರೂ ಕಾವ್ಯ ಮತ್ತು ನಾಟಕ ಕ್ಷೇತ್ರದಲ್ಲಿ ಇವರ ದುಡಿಮೆ ಸಮೃದ್ಧವಾಗಿರದ್ದರೂ ಸಹ ವಿಮರ್ಶಕರೂ ನಿರ್ವಿವಾದವಾದ ಒಪ್ಪಿಕೊಂಡಿರುವುದು ಇವರು ಶ್ರೇಷ್ಠ ಪ್ರಬಂಧಕಾರರೆಂದು ಇವರು ನಾಲ್ಕು ಪ್ರಬಂಧ ಸಂಕಲನಗಳನ್ನು ಪ್ರಕಟಿಸಿದ್ದಾರೆ. ' ರಾಮ ಚಾರಿಯ ನೆನಪು" (1931) "ರಥಸಪ್ತಮಿ ಮತ್ತು ಇತರ ಚಿತ್ರಗಳು" (1945) "ಈಚಲುಮರದ ಕೆಳಗೆ" (1949) "ಧೇನುಕ ಪುರಾಣ " (1967) ಕೃತಿಗಳು ಕ್ರಮವಾಗಿ ಪ್ರಕಟವಾಗಿದೆ.

**ಕುವೆಂಪು :-**

ಮಲೆನಾಡಿನ ಕವಿಯಾದ ಕುವೆಂಪುರವರು ಮಲೆನಾಡಿನ ಪ್ರಕೃತಿ ಸೌಂದರ್ಯವನ್ನು ತಮ್ಮ ಕೃತಿಗಳ ಮೂಲಕ ಓದಿಗನಿಗೆ ಉಣಬಡಿಸಿದ್ದಾರೆ ಮಲೆನಾಡಿನ ವೈವಿಧ್ಯಮಯವಾದ ಜೀವನದರ್ಶನವನ್ನು ನಮಗೆ ಇಲ್ಲಿ ಸಾಕಷ್ಟು ಲಭ್ಯಗೊಳಿಸಿದ್ದಾರೆ. ಕವಿಶೈಲಿ ನವಿಲೂಲ್ಲು ಸಿಬ್ಬಲುಗುಡ್ಡೆ. ಮೊದಲಾದ ಕವಿವರ್ಣಿತ ಸ್ಥಳಗಳು ನಮಗೆ ರೋಮಾಂಚಕಾರಿಯಾದ ಅನುಭವನ್ನು ನೀಡಿ ಆಕರ್ಷಣೆಯ ಹೊಸ ದಿಗಂತವನ್ನು ತೆರೆದಿಡುತ್ತವೆ. ಇಂತಹ ಅನುಭವಗಳನ್ನು ಕುವೆಂಪುರವರು ತಮ್ಮ ಪ್ರಬಂಧಗಳ ಮೂಲಕವು ತೋರಿಸಿಕೊಟ್ಟಿದ್ದಾರೆ.

ಕುವೆಂಪು ಅವರು " ಹಾಸ್ಯಚಟಾಕಿ 'ಬಂದನಾ ಹುಲಿರಾಯನು" ' ಪುಟ್ಟಚಾರಿಯ ಕಾಡುಕೋಳಿ ' 'ಅಜ್ಜಯ್ಯನ ಅಭ್ಯಂಜನ' ರಾಮರಾವಣರ ಯುದ್ದ" 'ಅಣ್ಣಪ್ಪನ ರೇಷ್ಮೆ ಕಾಯಿಲೆ' ಕಾಡಿನಲ್ಲಿ ಕಳೆದ ಒಂದಿರುಳ್ಳು' ಪ್ರಬಂಧಗಳನ್ನು ಬರೆದಿದ್ದು ಅವು ಕನ್ನಡ ಪ್ರಬಂಧ ಸಾಹಿತ್ಯ ಕ್ಷೇತ್ರವನ್ನು ರಂಗುಗೊಳಿಸಿ ಶ್ರೀಮಂತವಾಗಿಸಿವೆ.

**ಗೊರೂರು ರಾಮಸ್ವಾಮಿ ಅಯ್ಯಂಗಾರ್:-**

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರನ್ನು ಬಿಟ್ಟು ಕನ್ನಡ ಸಾಹಿತ್ಯವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ ಇವರು ಸಾಹಿತ್ಯದ ಬಹಳಷ್ಟು ಪ್ರಕಾರಗಳಲ್ಲಿ ಸಾಕಷ್ಟು ಕೆಲಸ ಮಾಡಿದ್ದರೂ ಸಹ ಕಾರಂತರು ಹೇಗೆ ಪ್ರಮುಖವಾಗಿ ಕಾಂದಬರಿಕಾರರೋ ಬೇಂದ್ರೆಯವರು ಹೇಗೆ ಭಾವಗೀತೆಕಾರರೋ ಮಾಸ್ತಿ ಅವರು ಹೇಗೆ ಸಣ್ಣಕತೆಕಾರರೋ ಹಾಗೆಯೋ ಗೊರೂರು ಮುಖ್ಯವಾಗಿ ಪ್ರಬಂಧಕಾರರು ಇವರು ಪ್ರಬಂಧ ಸಂಕಲನಗಳಲ್ಲಿ ಹೆಚ್ಚಾಗಿ ಚಿತ್ರಗಳಿವೆ. ಕೆಲವು ಹರಟೆಯ ಲಕ್ಷಣಗಳನ್ನು ಒಳಗೊಂಡಿವೆ ಚಿತ್ರಗಳಲ್ಲಿ ಜೀವನ ಚಿತ್ರಗಳನ್ನು ವ್ಯಕ್ತಿ ಚಿತ್ರಗಳನ್ನು ಕಾಣಬಹುದು. ಗೊರೂರು ಪ್ರಬಂಧಗಳು 'ಹಳ್ಳಿಯಚಿತ್ರಗಳು' 'ನಮ್ಮಊರಿನ ರಸಿಕರು' ' ಬೈಲಹಳ್ಳಿಸರ್ವೆ' 'ಗರುಡಬಂಬದ ದಾಸಯ್ಯ' 'ಬೆಸ್ತರ ಕರಿಯ' 'ಹೇಮಾವತಿಯ ತೀರದಲ್ಲಿ' 'ಕಥೆಗಳು ಮತ್ತು ವಿನೋಧಚಿತ್ರಗಳು' ಬೆಟ್ಟದ ಮನೆಯಲ್ಲಿ ಮತ್ತು ಇತರ ಪ್ರಬಂಧಗಳು ಇವು ಅವರ ಪ್ರಸಿದ್ಧ ಪ್ರಬಂಧ ಸಂಕಲನಗಳಾಗಿವೆ.

**ವಿ. ಸೀತಾರಾಮಯ್ಯ:-**

ಕನ್ನಡ ಪ್ರಬಂಧಗಳ ರಚನೆಯಲ್ಲಿ ದೊಡ್ಡ ಹೆಸರು ಮಾಡಿದ ಪ್ರಮುಖರಲ್ಲಿ ವಿ. ಸೀತಾರಾಮಯ್ಯನವರೂ ಒಬ್ಬರೂ 1927 ರಲ್ಲಿ ಪ್ರಕಟವಾದ ' ಪ್ರವಾಸ ಸಾಹಿತ್ಯ' ಕೃತಿಯೇ ಲಲಿತ ಪ್ರಬಂಧದ ಮೊದಲನೆಯ ಗ್ರಂಥವಾಗಿದೆ. ನಂತರ 1959 ರಲ್ಲಿ ಪ್ರಕಟವಾದ " ಬೆಳದಿಂಗಳು " ಮತ್ತು ' ಸೀಕರಣೆ" ಪ್ರಬಂಧಗಳು ಓದುಗರನ್ನು ಆಕರ್ಷಿಸಿವೆ.

**ತೀ. ನಂ. ಶ್ರೀ ಕಂಠಯ್ಯ:-**

ತೀ. ನಂ. ಶ್ರೀಕಂಠಯ್ಯನವರು ' ನೆಂಟರು ' ಸಂಕೀರ್ಣ ಸ್ವರೂಪದ ಸಂಕಲನ ಕನ್ನಡ ಪ್ರಬಂಧ ಸಂಕಲನಗಳಲ್ಲಿ ಇದೊಂದು ಗಟ್ಟಿಮುಟ್ಟಾದ ಕೃತಿ ಒಪ್ಪ ಓರಣ ಮತ್ತು ಅಚ್ಚುಕಟ್ಟು ತನದಿಂದ ಕೂಡಿದ ಸರ್ವಾಗೀಣ ಸುಂದರವಾದ ಬರವಣಿಗೆಯನ್ನು ನಾವಿಲ್ಲಿ ಕಾಣಬಹುದು. ' ನಂಟರು ' 'ನೆಗಡಿ ' ಮಮತೆ ಮೋಟು ' ಇವು ಅವರ ಪ್ರಬಂಧ ಸಂಕಲನದಲ್ಲಿ ಕಂಡು ಬರುವ ಪ್ರಬಂಧಗಳಾಗಿವೆ.

**ರಾವ್ ಬಹುದ್ದೂರ್ :-**

ರಾವ್ ಬಹುದ್ದೂರ್ ಅವರ ' ಮರೆಯಾದ ನೆನಪುಗಳು 'ನಿಜಕ್ಕೂ ಮರೆಯಲಾರದ ನೆನಪುಗಳು ನಿಜಕ್ಕೂ ಮರೆಯಲಾರದ ಪ್ರಬಂಧ ಕೃತಿ ಗ್ರಾಮ ಮತ್ತು ನಗರಗಳಲ್ಲಿನ ದಟ್ಟವಾದ ಜೀವಂತ ಸಮಸ್ಯೆ ಗಳನ್ನು ತಮ್ಮ ಪ್ರಬಂಧಗಳ ವಸ್ತುವನ್ನಾಗಿ ಆರಿಸಿಕೊಂಡು ಮನೋಜ್ಞವಾಗಿ ವಿಶ್ಲೇಷಿಸಿದ್ದಾರೆ. ಇವರ ಪ್ರಬಂಧಗಳು " ಅಗಳಿಯ ಮಹಿಮೆ" ಯಲ್ಲಿ ಬಡತನದ ಮಹಿಮೆಯಿದೆ. 'ಚಿನ್ನದ ಉತ್ಪಾದನೆ' ಯಲ್ಲಿ ಬಾಲ್ಯದ ಹುಡುಗಾಟಿಕೆಯ ಕುತೂಹಲವನ್ನು ಕಾಣಬಹುದು " ದೆವ್ವದ ಮನೆ" ಪ್ರಬಂಧ ದೆಷದ ಬಗ್ಗೆ ಜನ ಎಷ್ಟರ ಮಟ್ಟಿಗೆ ತಪ್ಪು ತಿಳುವಳಿಕೆಯನ್ನು ಹೊಂದಿರುತ್ತಾರೆ. ಎಂಬುದರ ಸತ್ಯವನ್ನು ತಿಳಿಸಿಕೊಡುತ್ತದೆ. ಬರುಡೆ ಬಿಂದಾಚಾರ್ಯರು" ಪ್ರಬಂಧದಲ್ಲಿ ಬಿಂದಾಚಾರ್ಯರು ಹೇಳುವ ಕಥೆಗಳು ಹೊಟ್ಟೆ ಹುಣ್ಣಾಗುವ ಹಾಗೆ ನಗಿಸುತ್ತವೆ.

ಎಂ. ವಿ. ಸೀತಾರಾಮಯ್ಯ :-

ಪ್ರಬಂಧಗಳಲ್ಲಿ ಕಾವ್ಯದ ಸೊಗಸನ್ನು ತಂದವರು ಎಂ. ವಿ. ಸೀತಾರಾಮಯ್ಯನವರು ಇವರು ಧೂಮಲೀಲೆ ಮತ್ತು ಮುಗಿಲುಗಳು' ಎಂಬ ಪ್ರಬಂಧ ಸಂಕಲನಗಳನ್ನು ಪ್ರಕಟಿಸಿದ್ದಾರೆ. 1950 ರಲ್ಲಿ ಮುಗಿಲುಗಳು" ಎಂಬ ಶೀರ್ಷಿಕೆಯಲ್ಲಿ ಪ್ರಕಟವಾದ ಕೃತಿಯನ್ನು 1959 ರಲ್ಲಿ 'ಧೂಮಲೀಲೆ' ಎಂಬ ಪ್ರಬಂಧಗಳನ್ನು ಸೇರಿಸಿ 'ಧೂಮಲೀಲೆ ಮತ್ತು ಮುಗಿಲುಗಳು' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದರು ಇಪ್ಪತ್ತು ವರ್ಷಗಳ ಅವಧಿಯಲ್ಲಿ ಆಗಾಗ ಬರೆದ ವಿವಿಧ ಬಗ್ಗೆಯ ಹತ್ತು ಪ್ರಬಂಧಗಳು ಇಲ್ಲಿ ಸಂಕಲನಗೊಂಡಿದೆ.

ಹಾ. ಮಾ. ನಾಯಕ :-

ಹಾ. ಮಾ. ನಾಯಕರ ನಮ್ಮ ಮನೆಯ ದೀಪ" ಕನ್ನಡ ಪ್ರಬಂಧ ಸಾಹಿತ್ಯದಲ್ಲಿ ಹೊಸಬಗ್ಗೆಯ ಕೃತಿ ಇವರು ಪ್ರಬಂಧಕ್ಕೆ ವಸ್ತುವನ್ನು ಬಳಸಿಕೊಂಡಿರುವ ರೀತಿ ವಿಶಿಷ್ಟವಾಗಿದೆ. ' ರಮಾ' ಇಲ್ಲಿನ ಒಂದು ಕೃತಿಯಲ್ಲಿನ ಎಲ್ಲ ಪ್ರಬಂಧಗಳ ವಸ್ತು ಒಂದೇ ಆಗಿರುವುದು. ಕನ್ನಡ ಲಲಿತ ಪ್ರಬಂಧಗಳ ಇತಿಹಾಸದಲ್ಲಿ ಇದೇ ಮೊದಲ ಕೃತಿಯ ಉದ್ದಕೂ ರಮೆಯ ಸುತ್ತ ಪ್ರಬಂಧಕಾರರು ಮನಸ್ಸು ಸುತ್ತುತ್ತದೆ.

ಒಂದೇ ವಸ್ತುವನ್ನು ಬಳಸಿದರೂ ಎಲ್ಲಿಯು ಏಕತಾನತೆಯಾಗಲಿ,ಪುನರಾವರ್ತನೆಯಾಗಲಿ ಕಂಡುಬರುವುದಿಲ್ಲ. ಇದು ಅಪರೂಪದ ಕಲಾ ಪ್ರತಿಭೆಯಾಗಿದೆ.

ಎಚ್ಚೆಸ್ಕೆ:-

ಕನ್ನಡದ ಉತ್ತಮ ಪ್ರಬಂಧಕಾರರ ಸಾಲಿನಲ್ಲಿ ಅಗತ್ಯವಾಗಿ ನೆನೆಯ ಬೇಕಾದ ಹೆಸರು ಎಚ್ಚೆಸ್ಕೆ. ಇವರು ಪತ್ರಿಕೆಗಳಲ್ಲಿನ ತಮ್ಮ ಬರಹಗಳಿಂದ ಚಿಂತನೆಗಳಿಂದ ಮತ್ತು ವ್ಯಕ್ತಿ ಚಿತ್ರಗಳಿಂದ ಕನ್ನಡಿಗರ ಮನೆಮಾತಾಗಿದ್ದಾರೆ. ಇವರ ಆಧುನಿಕ ಗದ್ಯದ ಸೊಗಸನ್ನು ಅವರ ಪ್ರಬಂಧಗಳಲ್ಲಿ ಕಾಣಬಹುದಾಗಿದೆ. ಎಚ್ಚೆಸ್ಕೆ.ಈವರೆಗೆ 'ಜೇಡನ ಬಲೆ' ಮತ್ತು 'ಕಳ್ಳಹೊಕ್ಕಮನೆ' ಎಂಬ ಎರಡು ಉತ್ತಮ ಪ್ರಬಂಧ ಸಂಕಲನಗಳನ್ನು ಹೊರತಂದಿದ್ದಾರೆ. ಅತೀ ದೀರ್ಘವೂ ಅಲ್ಲದ ಅತೀ ಚಿಕ್ಕವೂ ಅಲ್ಲದ ಮಧ್ಯಮ ಪ್ರಮಾಣದ ಇವರ ಪ್ರಬಂಧಗಳು ವಿಚಾರ ಪೂರ್ಣವಾಗಿಯೂ ಆಕರ್ಷಕವಾಗಿಯೂ ಇವೆ

**ಎನ್.ಪ್ರಹ್ಲಾದ್ ರಾವ್. :**

ಎನ್ ಪ್ರಹ್ಲಾದ್ ರಾವ್ ಅವರು ಪ್ರಬಂಧ ಕ್ಷೇತ್ರದಲ್ಲಿ ಉತ್ತಮ ಕೃಷಿ ಮಾಡಿದ್ದಾರೆ. ಅವರ ದುಡಿಮೆ ಗಮನಾರ್ಹವಾಗಿದೆ. ಅವರು ಈವರೆಗೆ. 'ರಥ-ರಥಿಕ' 'ಮಧುವ್ರತ' 'ಮುತ್ತಿನಹಾತ' ಎಂಬ ಮೂರು ಪ್ರಬಂಧಗಳನ್ನು ಪ್ರಕಟಿಸಿದ್ದಾರೆ ಆತ್ಮೀಯತೆ ನಾನಾ ಮುಖಗಳಿಂದ ವಿಷಯ ಪರಾಮರ್ಶೆ ಲಘು ಹಾಸ್ಯಗಳು ಮುಂತಾದ ಗುಣಗಳಿಂದ ಇವರ ಪ್ರಬಂಧಗಳು ಮನಸೆಳೆಯುತ್ತವೆ. ಭಾಷಾಣದ ಧೋರಣೆ. ಸಂಭಾಷಣೆಯ ಸಹಜತೆ. ಕಥನ ನಿರೂಪಣೆಯ ಮೋಹಕತೆ. ಇವೆಲ್ಲವನ್ನೂ ಇಲ್ಲಿ ಕಾಣಬಹುದು.

**ರಾ.ಯಾ. ಧಾರವಾಡಕರ್.**

ರಾ.ಯಾ.ಧಾರವಾಡಕರ್ ಅವರ 'ಧೂಮ್ರವಲಯಗಳು. ಕೃತಿಯಲ್ಲಿ 'ನನ್ನ ಅಹಂಕಾರ' ರೈಲು ಪ್ರವಾಸ' 'ನಾನು ಭಾಷಣಕ್ಕೆಹೋಗಿದ್ದೆ' ಮೂಡನಂಬಿಕೆಗಳು' 'ದೂರದೃಷ್ಟಿ' 'ಧೂಮ್ರವಲಯಗಳು' ಪ್ರಬಂಧಗಳ ಜೊತೆಗೆ ಪ್ರಬಂಧದ ಗುಣಲಕ್ಷಣಗಳನ್ನು ಸಮರ್ಥವಾಗಿ ತಿಳಿಸುವ 'ಹರಟೆ' ಎಂಬ ಲೇಖನವೂ ಸೇರಿ ಒಟ್ಟು ಏಳು ಬರಃಗಳಿವೆ.

**ರಾ,ಕು.;**

ಲಲಿತ ಸಾಹಿತ್ಯದಲ್ಲಿ ಬೌದ್ಧಿಕವಾಗಿ ಎಷ್ಟೆಲ್ಲ ಚಿಂತಿಸಬಹುದು ಎಂಬುದಕ್ಕೆ ರಾ.ಕು. ಅವರ ಪ್ರಬಂಧಗಳು ಉತ್ತಮ ನಿದರ್ಶನವಾಗಿದೆ. ಆಲೋಚನೆಯ ರಸುವು ಅಧ್ಯಯನದ ಯೋಗ್ಯ ಬಳಕೆ. ಜೀವನವನ್ನು ಅರ್ಥೈಸುವ ವಕ್ರವಿಧಾನ ವಿಂಡಂಬನೆಯ ಮೋಜು ಅಭಿವ್ಯಕ್ತಿಯ ಕಲಾವಂತಿಕೆ. ನಗೆಯ ಮೋಡಿ ಇವರ ಪ್ರಬಂಧಗಳ ವಿಶಿಷ್ಟ ಗುಣವಾಗಿದೆ. ರಾ.ಕು. ಕನ್ನಡದಲ್ಲಿ ವಿಮರ್ಶಕರನ್ನು ಗೆದ್ದುಕೊಂಡು ಪ್ರಬಂದಕಾರರು. ಅವರು ಪ್ರಕಟಿಸಿದ 'ಗಾಳಿಪಟ' ಮತ್ತು 'ದೇವಕನ್ಯೆ' ಎಂಬ ಎರಡು ಸಂಕಲನಗಳಲ್ಲಿ 'ಗಾಳಿಪಟ' ಹೆಚ್ಚು ಜನಪ್ರಿಯವಾಯಿತು ರಾ.ಕು ಅವರ ಪ್ರಬಂಧಗಳೂ ತನ್ನ ತನದಿಂದ ವಿಶಿಷ್ಟವಾಗಿ ಭಿನ್ನವಾಗಿ ನಿಂತುಕೊಳ್ಳುತ್ತವೆ.

**ಎಂ. ರಾಮರಾವ್ —**

ಇಂಗ್ಲೀಷ ಸಾಹಿತ್ಯದಲ್ಲಿ ಕಂಡು ಬರುವ ಪ್ರಬಂಧಗಳ ವೈವಿಧ್ಯವನ್ನು ಕನ್ನಡದಲ್ಲೂ ತರಲು ಪ್ರಯತ್ನಿಸಿ.ಯಶಸ್ವಿಯಾದ ಮುಖ್ಯರಲ್ಲಿ ಎಂ. ರಾಮರಾವ ಒಬ್ಬರು. ಅವರು ಮೂರು ಪ್ರಬಂಧ ಸಂಕಲನಗಳನ್ನು ಪ್ರಕಟಿಸಿದ್ದಾರೆ. 'ಇಪ್ಪತ್ತಾರು ಇಂಗ್ಲೀಷ್ ಪ್ರಬಂಧಗಳು' 'ನಮ್ಮ ಅರಣ್ಯಯಾತ್ರೆ'

ಮತ್ತು ಇತರ ಪ್ರಬಂಧಗಳು ' ಪಾದಯಾತ್ರ' ಎಂಬ ಶೀರ್ಷಿಕೆಗಳಲ್ಲಿ ಅವು ಪ್ರಕಟವಾಗಿದೆ. ಹೆಸರೇ ಸೂಚಿಸುವಂತೆ ಎಪ್ಪತ್ತಾರು ಇಂಗ್ಲೀಷ್ ಪ್ರಬಂಧಗಳು. ಇಂಗ್ಲೀಷ್ನ ಶ್ರೇಷ್ಠ ಪ್ರಬಂಧಕಾರರ ಕೆಲವು ಶ್ರೇಷ್ಠ ಪ್ರಬಂಧಗಳನ್ನು ಆಯ್ದು ಕನ್ನಡದಲ್ಲಿ ಅನುವಾದ ಮಾಡಿದಂತಹುಗಳು. ಒಳ್ಳೆಯ ಕಲ್ಪನೆ. ಸೂಕ್ತ ಘಟನೆಗಳು. ಕನಸು. ತತ್ತ್ವವರ್ಣನೆ, ಮುಂತಾದ ಗುಣಗಳಿಂದ ರಾಮರಾವರ ಪ್ರಬಂಧಗಳು ರಂಜಕವಾಗಿದೆ.

**ಅ.ರಾ. ಮಿತ್ರ.** –

ಅ.ರಾ. ಮಿತ್ರ ಅವರ 'ಭಾಲ್ಕಿನಿಯ ಬಂಧುಗಳು' ಕನ್ನಡದ ಮೊದಲ ದರ್ಜೆಯ ಪ್ರಬಂಧ ಸಂಕಲನಗಳಲ್ಲೋಂದು ಮಿತ್ರರ ಮತ್ತೋಂದು ಪ್ರಬಂಧ ಸಂಕಲನ 'ಯಾರೋ ಬಂದಿದ್ದರು.' ಉತ್ತಮ ಪ್ರಬಂಧಸಂಕಲನವಾಗಿದೆ. ವಿಚಾರದ ಅಭಿವ್ಯಕ್ತಿಯ ಚೆಲುವು. ಭಾವನೆಗಳ ಬೆರಗು. ಸನ್ನಿವೇಶನ ಸುಂದರ ಚಿತ್ರಣ ಜೀವನದ ಕಷ್ಟ ಸುಖಗಳ ಅರಿವು.ಪ್ರೇಮ, ಆದರ್ಶ ಮಾನವ ವೈಪರೀತ್ಯಗಳ ಸೂಕ್ಷ್ಮಗ್ರಹಣೆ.ಮತ್ತು ಮೃದುವಾದ ಲೇವಡಿ, ಅ.ರಾ.ಮಿತ್ರದ ಪ್ರಬಂಧಗಳ ದೊಡ್ಡ ಯಶಸ್ಸಿಗೆ ಕಾರಣವಾಗಿದೆ.

ಹೀಗೆ ಮೇಲ್ಕಂಡ ಪ್ರಸಿದ್ಧ ಸಾಹಿತಿಗಳು ಕನ್ನಡ ಪ್ರಬಂಧ ಸಾಹಿತ್ಯವನ್ನು ಕೃಷಿ ಮಾಡುವ ಮೂಲಕ ಕನ್ನಡದಲ್ಲಿ ಪ್ರಬಂಧದ ಮೆರಗನ್ನು ಕೊಟ್ಟಿರುವರು.ಹಾಗೇ ಪ್ರಬಂಧದ ಬೆಳವಣಿಗೆಯನ್ನು ತಂದಿರುವುದನ್ನು ಕಾಣಬಹುದಾಗಿದೆ. ಕನ್ನಡದಲ್ಲಿ ಪ್ರಬಂಧ ಸಾಹಿತ್ಯದ ಮೌಲ್ಯವನ್ನು ಹೆಚ್ಚಿಸಿದ್ದಾರೆ. ಮತ್ತು ಪ್ರಬಂಧ ಸಾಹಿತ್ಯವನ್ನು ಬೆಳೆಸಿದ್ದಾರೆ.

## ಉಪಸಂಹಾರ

ಲಲಿತ ಪ್ರಬಂಧಗಳು ಯಾವ ರೀತಿಯಲ್ಲಿ ಇರುವುದು ಎಂದು ತಿಳಿಯಲಾಗಿದೆ.ಲಲಿತ ಪ್ರಬಂಧಗಳು ತನ್ನದೇ ಆದ ನೈಜತೆಯನ್ನು ಒಳಗೊಂಡಿದ್ದು ಪ್ರಬಂಧಗಳ ರೂಪತೆಯನ್ನು ಸಹ ತಿಳಿಯಬಹುದಾಗಿದೆ. ಹಾಗು ತನ್ನದೆ ಆದ ಮಹತ್ವವನ್ನು ಪಡೆದಿದ್ದು ಪ್ರಬಂಧಗಳ ಮೂಲಕ ವಾಚಕನ ಮನಸೆಳೆಯುವಲ್ಲಿ ಅತ್ಯಂತ ಯಶಸ್ವಿಯಾಗುವುದರಲ್ಲಿ ತನ್ನ ತನವನ್ನು ವೈಚಾರಿಕ ತನವನ್ನು ತಿಳಿಸುವುದರ ಮೂಲಕ ವಾಚಕನನ್ನು ಹೆಚ್ಚಿನ ರೀತಿಯಲ್ಲಿ ಪ್ರಬಂಧಗಳ ಮೂಲಕ ಬಂಧಿಸುವಲ್ಲಿ ಯಶಸ್ವಿಯಾಗುವುದನ್ನು ಕಾಣಬಹುದಾಗಿದೆ.

ಲಲಿತ ಪ್ರಬಂಧಗಳು ಸಾಹಿತ್ಯತೆಯಿಂಧ ಕೂಡಿದ್ದು ಓದುಗನ ಮನಸ್ಸಿನಲ್ಲಿ ಅಚ್ಚಳಿಯುವಂತೆ ಮಾಡುವಲ್ಲಿ ಹೆಚ್ಚಿನ ಪ್ರಬಂಧಗಳು ಸೆಳೆಯುತ್ತವೆ ಎಂದು ತಿಳಿಯಬಹುದು ಒಟ್ಟಾರೆಯಾಗಿ ಪ್ರಬಂಧಗಳು ಇತ್ತೀಚಿನ ದಿನಗಳಲ್ಲಿ ಏರಿಳಿತವನ್ನು ಕಾಣುತ್ತಾ ಬಂದಿವೆ ಎಂದರೆ ತಪ್ಪಾಗಲಾರದು ಆದರೂ ಪ್ರಬಂಧಗಳು ತನ್ನ ವಿಚಾರವಂತಿಕೆಯಿಂದ ವಾಚಕರನ್ನು ಸೆಳೆಯುತ್ತಿವೆ. ಎಂದು ತಿಳಿಯಲಾಗಿದೆ.

1. ಗೌರಜ್ಜಿ
2. ಹಗಲುಗನಸುಗಳು
3. ಹೂವುಗಳು
4. ಗಾಡಿಯ ಪ್ರಯಾಣ
5. ಕುರುಡ
6. ಲಲಿತೆಯ ವಿದ್ಯಾಭ್ಯಾಸ
7. ಪ್ರಣಯ ಯಾತ್ರೆ

## ಅಧ್ಯಾಯ 3 ಎ.ಎನ್. ಮೂರ್ತಿರಾವ್ ಅವರ ಲಲಿತ ಪ್ರಬಂಧಗಳ ವಸ್ತು ವೈವಿಧ್ಯ

'ಹಗಲುಗನಸು' ಎಂಬ ಲಲಿತ ಪ್ರಬಂಧವು ಮೊದಲಿಗೆ 1937 ಪ್ರಕಟವಾಯಿತು. ನಂತರ ಕೊನೆಯ ಮುದ್ರಣವು ಸಹ 2008 ಕಾಣಬಹುದು ಲೇಖಕರು ಬರೆದಿರುವ ಈ ಪ್ರಬಂಧವು ಲಲಿತ ಪ್ರಬಂಧದ ಹೊಸತನವನ್ನು ತೋರಿದೆ. ಈ ಒಂದು ಪ್ರಬಂಧದಲ್ಲಿ ಒಟ್ಟು ಏಳು ಪ್ರಬಂಧಗಳು ಇರುವುದು.

ಲೇಖಕರು ಬರೆದಿರುವ ಈ ನಿಬಂಧಗಳು ತನ್ನ ಗುಣಧರ್ಮವನ್ನು ಎತ್ತಿ ಹಿಡಿಯುವುದು ಎಂದು ತಿಳಿಯಬಹುದಾಗಿದೆ. ಗೌರಜ್ಜಿಯ ರಚನೆಯಲ್ಲಿ ಅವರ ಪಾತ್ರ ಎಷ್ಟು ಮಹತ್ವ ಮನೆಯಲ್ಲಿ ಹಿರಿಯರ ಶ್ರೇಷ್ಠತೆಯ ಸ್ಥಾನವನ್ನು ಲೇಖಕರು ಈ ಪ್ರಬಂಧದಲ್ಲಿಯು ಸಹ ಕನಸುಗಳು ಯಾವ ರೀತಿ ವಿಶೇಷತೆಯನ್ನು ಪಡೆಯುತ್ತದೆ ಆ ಕನಸುಗಳ ಮೂಲಕ ತನ್ನ ಬಯಕೆಯನ್ನು ಈಡೇರಿಸಿಕೊಳ್ಳಬಹುದು ಎಂದು ಲೇಖದರ ಒಮ್ಮತ ಎಂದು ತಿಳಿಯಬಹುದು ಹೂವುಗಳ ವರ್ಣನೆ. ಅವುಗಳ ಗುಣಧರ್ಮ ಅವುಗಳ ಯಾವ ರೀತಿಯಲ್ಲಿ

ಸೊಬಗನ್ನು ಸೂಸುತ್ತವೆ ಹೂವುಗಳು ತನ್ನ ಸಹಜಧರ್ಮ ದ ಮೂಲಕ ಗುಣವಿಶೇಷತೆಯನ್ನು ತಿಳಿಯಬಹುದು ಹೂವುಗಳು ಎಲ್ಲ ಕಾಲದಲ್ಲಿಯು ಅವಶ್ಯಕ ವೆಂದು ಲೇಖದರ ಮಾತು ಲೇಖಕರು ಹೇಳುವಂತೆ ರಾತ್ರಿಯ ಸಮಯದಲ್ಲಿ ಗಾಡಿಯ ಪ್ರಾಮಾಣದ ಸ್ವಃತ ಅನುಭವದ ಮೂಲಕ ಬರೆದಿರುವುದನ್ನು ಕಾಣಬಹುದಾಗಿದೆ. ಕುರುಡ ಪ್ರಬಂಧದಲ್ಲಿ ತನಗಿಂತಲೂ ತನ್ನ ಹೆಂಡತಿ ತೋರಿದ ಕನಿಕರವು ಶ್ರೇಷ್ಠವಾಯಿತು ಎಂದು ಲೇಖಕರ ಒಮ್ಮತ ಲೇಖಕರು ತನ್ನ ಹೆಂಡತಿಯನ್ನು ವಿದ್ಯಾಭ್ಯಾಸ ಕೊಡಿಸುವ ಆಹುವಂತಹ ಫಜೀತಿಯ ಸಂಧರ್ಭವನ್ನು ಸೊಗಸಾಗಿ ಬರೆದಿರುವರು ಲೇಖದರು ತಮ್ಮ ಬರವಣಿಗೆಯ ಮೂಲಕ ತಮ್ಮ ಪ್ರಣಯ ಯಾತ್ರೆಯ ಅನುಭವವನ್ನು ಲೇಖನದ ಮೂಲಕ ಬರೆದಿರುವುದನ್ನು ಕಾಣಬಹುದು.

ಒಟ್ಟಾರೆಯಾಗಿ ಲೇಖಕರು ಬರೆದಿರುವ ಹಗಲು ಕನಸುಗಳು ಆಯೋಜನೆಯು ತನ್ನದೇ ಆದ ಸುಂದರತೆಯನ್ನು ಪಡೆದಿದ್ದು ಅವುಗಳನ್ನು ಮುಂದಿನ ಕ್ರಮದಲ್ಲಿ ಹೆಚ್ಚಿನ ರೀತಿಯಲ್ಲಿ ತಿಳಿಯಬಹುದು ಎನ್ನಲಾಗಿದೆ.

ಅಧ್ಯಾಯ –3

## ಎ.ಎನ್. ಮೂರ್ತಿರಾವ್ ಅವರ ಲಲಿತ ಪ್ರಬಂಧಗಳ ವಸ್ತು ವೈವಿಧ್ಯ

### ಗೌರಜ್ಜಿ :

ಲೇಖಕರು ಬರೆದಿರುವ ಈ ಪ್ರಬಂಧವು. ತನ್ನ ವಿಶೇಷತೆಯನ್ನು ಪಡೆದಿದೆ ಮನೆಯಲ್ಲಿ ಹಿರಿಯರಿಂದ ಆಗುವ ಅನುಕೂಲತೆಗಳನ್ನು ತಿಳಿಸುವರು. ಇಲ್ಲಿಯ ಕಥಾವಸ್ತು ಗೌರಜ್ಜಿ ಇವರು ಚಿಕ್ಕ ವಯಸ್ಸಿಗೆ ಮದುವೆ ಆಗಿ ಬಹುಬೇಗ ವಿಧವೆ ಪಟ್ಟವನ್ನು ಪಡೆಯುವ ಪರಿಸ್ಥತಿ ಒದಗಿತು ಲೇಖಕರ ಪ್ರಕಾರ ಮಕ್ಕಳಿಲ್ಲದವರಿಗೆ ಮಕ್ಕಳನ್ನು ಕಂಡರೆ ಬಲು ಪ್ರೀತಿ ಅದೇ ರೀತಿ ಗೌರಜ್ಜಿಯು ಸಹ ತನ್ನ ಬಂಧುಗಳ ಮಕ್ಕಳನ್ನು ತನ್ನ ಮಕ್ಕಳಂತೆ ಕಾಣುತ್ತಿದ್ದರು. ಮಕ್ಕಳಿಗೂ ಅಷ್ಟೇ ಗೌರಜ್ಜಿಯನ್ನು ಕಂಡರೆ. ಎಲ್ಲಿಲ್ಲದ ಪ್ರೀತಿ ಗೌರಜ್ಜಿಗೂ ಸಹ ಮಕ್ಕಳೆಂದರೆ ತುಂಬಾ ಪ್ರೀತಿ ಯಾರಾದರು ದೊಡ್ಡವರು ಮಕ್ಕಳಿಗೆ ಒಡೆದರೆ ಗೌರಜ್ಜಯು ನಡುವೆ ಹೋಗಿ "ರತ್ನದಂಥ ಮಗು" ಏನೋ ಚೇಷ್ಟೆ ಮಾಡುತ್ತಾರೆಯೇ? ನಿಮ್ಮಂಥವರಿಗೆ " ಮಕ್ಕಳನ್ನೇಕೆ ಕೊಟ್ಟನೋ ಕಣ್ಣಿಲ್ಲದ ದೇವರು" ಎಂದು ಬಿಡಿಸುತ್ತದ್ದರು.

ಮಕ್ಕಳಿಗೆ ಗೌರಜ್ಜಿಯ ಕಥೆ ಕೇಳುವುದೆಂದರೆ ತುಂಬಾ ಇಷ್ಟ ಆದ್ದರಿಂದ ದಿನವು ರಾತ್ರಿ ಹುಡುಗರನ್ನೆಲ್ಲ ಮಲಗಿಸಿ ಕಥೆ ಹೇಳುತ್ತಿದ್ದರು. ಕೆಲವೊಂದು ಚೇಷ್ಟೆ ಹುಡುಗರು ಏನಾದರು ಹೇಳಿದರೇ ಗೌರವ ಕೊಡುತ್ತಿರಲಿಲ್ಲ ಆಗ "[1] ಹೋಗ್ರೋ ಈ ಗಿನ ಕಾಲದ ಹುಡುಗರೇ ಹೀಗೆ! ನಮ್ಮ ಕಾಲದಲ್ಲಿ ಹುಡುಗರು ಹೀಗೆಲ್ಲಾ ಲಲ್ಲೆ ಒಡಿದುಕೊಂಡು ನಗುವುದೆಂದರೇನು! ಸೀಳಿ ತೋರಣ ಕಟ್ಟಿ ಬಿಡುತ್ತಿದ್ದರು" ಎಂದು ಹೇಳುತ್ತಿದ್ದರು. ಇನ್ನು ಹಬ್ಬಗಳು ಬಂತೆಂದರೆ ಮಕ್ಕಳಿಗೆ ಗೌರಜ್ಜಿಯೇ ದೇವರು. ಮನೆಯಲ್ಲಿ ಮಕ್ಕಳು ಎಡೆ ಇಡುವವರೆಗೆ ತಡೆಯದೇ ಹಸಿವು ಎಂದು ಪರದಾಡಿದಾಗ ಮನೆಯವರು " ಹಬ್ಬ ಅನ್ನುವುದಿಲ್ಲ.ಹರಿದಿನ ಅನ್ನುವುದಿಲ್ಲ. ಹೊಟ್ಟೆಯ ಆತುರ ಬಂದಿದೆ ಇವಕ್ಕೆ." ಎಂದು ಬೈಯ್ಯುತ್ತದ್ದರು. ಅದಕ್ಕೆ ಗೌರಜ್ಜಿ " ಪಾಪ ಮಕ್ಕಳು ದೇವರ ಹಾಗೆ ಹಬ್ಬ ಎಂದರೆ ಅವಕ್ಕೆ ಹತಹತ ಅದೇನು ಹಾಗೆ ಅಟ್ಟಿಕೊಳ್ಳುತ್ತಿರಿ? ಅವಕ್ಕೇನು ಉಪವಾಸದ ಕಟ್ಟು ? ಏನಾದರೂ ಕೊಟ್ಟುಬಿಡಬಾರದೆ? ಎಂದು ಮಕ್ಕಳನ್ನು ಕರೆದು ಅವಲಕ್ಕಿ ಬೆಲ್ಲವೋ, ಅರಳೋ ಏನಾದರೂ ಕೊಟ್ಟುಬಿಡುತ್ತಿದ್ದರು.

ಚಿಕ್ಕಂದಿನಲ್ಲೇ ಗಂಡನನ್ನು ಕಳೆದುಕೊಂಡು ಮಕ್ಕಳಿಲ್ಲದವರಿಗೆ ಅವರ ಹೃದಯ ಕಲ್ಲು ಎಂದು

[1] ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 3

ಎಲ್ಲರು ಹೇಳುವುದುಂಟು, ಆದರೆ ಗೌರಜ್ಜಿ, ಅದಕ್ಕೆ ತದ್ವಿರುದ್ಧ, ಚಿಕ್ಕ ವಯಸ್ಸಿನಿಂದಲೂ ಸಮೀಪದ ಬಂಧಗಳ ಮಕ್ಕಳನ್ನು ಸಾಕಿ ಸಲುಹಿದ್ದುದರಿಂದ ಆಕೆಗೆ ಮಕ್ಕಳ ಮೇಲೆ ಮಮಕಾರ ಇತ್ತು. ಬಂಧುಗಳ ಮಕ್ಕಳನ್ನು ತನ್ನ ಮಕ್ಕಳೆಂದು ತಿಳಿದು ಅವುಗಳ ಆರೈಕೆಯನ್ನು ನೋಡಿಕೊಂಡು ಆನಂದ ಪಟ್ಟ ಧೀಮಂತೆ ಈ ಗೌರಜ್ಜಿ.

ಲೇಖಕರು 'ಗೌರಜ್ಜಿ' ಪ್ರಬಂಧದಲ್ಲಿ ಮನೆಯಲ್ಲಿ ಅಜ್ಜಿಯರ ಮಹತ್ವವನ್ನು ಕುರಿತು ಹೇಳಿದ್ದಾರೆ. ಅಜ್ಜಿಯಿಂದ ಆಗುವ ಅನುಕೂಲಗಳು ಆಕೆಯಿಂದ ಸಿಗುವ ಪ್ರೀತಿ ಮಮಕಾರಗಳ ಬಗ್ಗೆ ಗೌರಜ್ಜಿ ಪ್ರಬಂಧ ತಿಳಿಸಿಕೊಡುತ್ತದೆ.

## ಹಗಲುಗನಸುಗಳು :

ಈ ಪ್ರಬಂಧದ ಮುಖ್ಯವಸ್ತು ಹಗಲುಗನಸುಗಳೇ ಆಗಿದ್ದೆ. ಕನಸುಗಳಲ್ಲಿ ಎರಡು ಒಗೆಗಳು ಒಂದು ರಾತ್ರಿ ಕಾಣುವ ಕನಸು ಎರಡನೆಯದು ಹಗಲು ಹೊತ್ತಿನಲ್ಲಿ ಕಾಣುವ ಕನಸು ಲೇಖಕರು ಇಲ್ಲಿ ಹಗಲುಗಳು ಮಹತ್ವವನ್ನು ತಿಳಿಸುತ್ತಾ ಹೋಗಿದ್ದಾರೆ.

ಮನುಷ್ಯನಿಗೆ ಆಸೆ ಆಕಾಂಕ್ಷೆಗಳು ಅಪಾರ ಅವು ನಿಜ ಜೀವನದಲ್ಲಿ ಕೈಗೂಡಬಹುದು. ಅಥವಾ ಇಲ್ಲಿದೆಯು ಇರಬಹುದು ಆದರೆ ಕನಸಿನಲ್ಲಿ ಅವೆಲ್ಲಾ ಸರಾಗವಾಗಿ ಕೈಗೂಡುತ್ತದೆ. ಮನುಷ್ಯ ಕಾಣುವ ಕನಸಿಗೆ ಯಾವುದೆ ಅಡೆತಡೆಗಳಿಲ್ಲದೇ ತನ್ನದೇ ಆದ ಒಂದು ಕಾಲ್ಪನಿಕ ಪ್ರಪಂಚ ಸೃಷ್ಟಿಯಾಗಿಬಿಡುತ್ತದೆ. ಇಲ್ಲಿ ಎಲ್ಲವೂ ಸಾಧ್ಯ ಆತನೇ ರಾಜ ಇದೆಲ್ಲಾ ಹಗಲು ಗನಸುಗಳಿಂದ ಮಾತ್ರ ಸಾಧ್ಯ

ಲೇಖಕರು ಚಿಕ್ಕವರಿದ್ದಾಗ ಅವರ ಸ್ನೇಹಿತರೂಬ್ಬರು " ಅರೇಬಿಯನ್ ನೈಟ್ಸ್" ಪುಸ್ತಕವನ್ನು ಓದಲು ಕೊಡುತ್ತಾರೆ. ಆ ಕಥೆಗಳನ್ನು ಓದಲಾರಂಭಿಸಿದಾಗ ಮೈಸೂರಿನ ಯಾವುದೋ ಧೂಳು ತುಂಬಿದ ಸಣ್ಣ ಬೀದಿಗಳಲ್ಲಿ ವಾಸವಾಗಿರುವುದು ಮರೆತುಹೋಗಿ ಬಂಗ್ದಾದ್ ಪಟ್ಟಣದಲ್ಲಿ ಹರೌನ್ ಆಲ್ ರಷೀದನ ಕಾಲದವನಾಗಿ ಬಿಡುತ್ತಾರೆ. ಕಥೆ ಓದುವುದು ಮುಂದುವರೆದಂತೆ ಇಪ್ಪತ್ತನೆಯ ಶತಮಾನದ ನಿಸ್ಸಾರವಾದ ನಾಗರೀಕತೆಯ ಆವರಣವು ಅಳಿದುಹೋಗಿ ಕಲ್ಪನೆಯ ಬಣ್ಣಗಳಿಂದ ಕೂಡಿ ಮನೋಹಕವಾದ ಆ ಹಳೆಯ ಕಾಲದ ಜೀವನವು ಪುನಃ ಅವರ ಕಣ್ಣ ಮುಂದೆ ನಿಲ್ಲುತ್ತದೆ.

ಪ್ರಪಂಚದಲ್ಲಿ ಸುಖಿಗಳೆಂದರೆ ಹಗಲುಗನಸು ಕಾಣುವವರು ಎನ್ನುತ್ತಾರೆ. ಲೇಖಕರು ವಿಧಿಯ ಹೊಡೆತವು ಎಷ್ಟೇ ಕ್ರೂರವಾಗಿರಲಿ ಅದೆಲ್ಲವನ್ನು ಮರೆತು ಪ್ರತಿಭೆಯ ಶಕ್ತಿಯಿಂದ

ರಮಣೀಯವಾದ ಪ್ರಪಂಚವೊಂದನ್ನು ನಿರ್ಮಿಸಿಕೊಂಡು ಪ್ರಪಂಚದ ಕಷ್ಟ ನಿಷ್ಠುರಗಳಿಗೆ ಸಿಶಿಯೂ ಸಿಕ್ಕದಂತೆ ಇರಬಲ್ಲರು ಹಗಲುಗನಸುಗಳು ಸ್ವರೂಪ ಮನುಷ್ಯನಿಗೆ ಮಯಸ್ಸಾದ ಹಾಗೆಲ್ಲಾ ವ್ಯತ್ಯಾಸ ಹೊಂದುತ್ತಾ ಹೋಗುತ್ತದೆ. ಚಿಕ್ಕ ವಯಸ್ಸಿನಲ್ಲಿ ಗೆಳೆಯರೊಡನೆ ಅಲೆದಾಡುವ ಕನಸು ಸ್ವಲ್ಪ ದೊಡ್ಡವರಾದ ಮೇಲೆ ಸಾಹಸ ಕಾರ್ಯಗಳನ್ನು ಮಾಡಿ ಕೀರ್ತಿ ಪಡೆಯಬೇಕೆಂಬ ಕನಸು ಸ್ವಲ್ಪ ಕಾಲ ಹೋದರೆ ಕನಸಿನ ಜೀವನದಲ್ಲಿ ಪ್ರಣಯಿಯೊಬ್ಬಳ ಜೊತೆಗಿನ ಕನಸು ಹೀಗೆ ಕನಸುಗಳು ವಿಸ್ತಾರಗೊಳ್ಳುತ್ತಾ ಹೋಗುತ್ತದೆ.

ಇನ್ನು ಲೇಖಕರು ತಮ್ಮ ಊರಿನ ಸಮೀಪವಿರುವ ಹೇಮವತಿ ನದಿಯ ದಂಡೆಯಲ್ಲಿರುವ ಹೊಸಪಟ್ಟಣದಲ್ಲಿ ಹಿಂದೆ ಹೈದರಾಲಿಯ ಕೋಟೆ ಕಟ್ಟಿಸಿದ ಕಥೆಯನ್ನು ಹೇಳುತ್ತಾ ತಾವು ಕೂಡ ಆ ಕೋಟೆಯನ್ನು ಭದ್ರಪಡಿಸಿ ಸೋಗಸದ ವನವನ್ನು ನಿರ್ಮಿಸಿಕೊಂಡು ಅಲ್ಲಿ ವಾಸ ಮಾಡಬೇಕೇಂದು ತಮ್ಮ ಕನಸುನ್ನು ಹೇಳುತ್ತಾರೆ ಲೇಖಕರು ಎಷ್ಟೋ ಸಲ ಹೊಸಪಟ್ಟಣಕ್ಕೆ ವಿಹಾರಕ್ಕೆ ಹೋದಾಗ ಜೊತೆ ಇದ್ದವರಿಗೆ ಹೇಳದೆ ಕದ್ದು ಹೋಗಿ ಅರಮನೆಯನ್ನು ಕಟ್ಟುವುದಕ್ಕೆ ಯಾವ ಸ್ಥಳ ಉತ್ತಮವಾದುದ್ದು ಉಪವನವನ್ನು ಯಾವ ಕ್ರಮವನ್ನನುಸರಿಸಿ ಮಾಡಬೇಕು ನದಿಯಿಂದ ನೀರೆತ್ತುವುದಕ್ಕೆ ಸರಿಯಾದ ಸ್ಥಳ ಯಾವುದು ಎಂದು ನೋಡಿಕೊಂಡು ಬರುತ್ತಿದ್ದರಂತೆ ಅಲ್ಲದೇ ತಮ್ಮ ಗಂಧರ್ವ ನಗರಿಗೆ ಒದಗಬಹುದಾದ ಸಂಕಷ್ಟಗಳಿಗೆ ಮೊದಲೇ ಪರಿಹಾರ ಉಪಾಯಗಳನ್ನು ಲೇಖಕರು ಕಂಡುಕೊಂಡಿದ್ದರಂತೆ. ಆದರೆ ಕುಬೇರನ ಬೊಕ್ಕಸವೊಂದು ವಶವಾಗಿಬಿಟ್ಟಿದ್ದರೆ. ಒಂದೆರಡು ವರ್ಷಗಳಲ್ಲಿ ಅವರ ಗಂಧರ್ವ ನಗರ ನಿರ್ಮಿತವಾಗಿ ಹೋಗುತಿತ್ತು.

ಕನಸುನ್ನು ಕಾಣುವ ನಮಗೆ ನಮ್ಮ ಬಯಕೆಗಳು ಕೈಗೂಡದಿದ್ದರೂ ಬಯಕೆಯಾದರೂ ಇದೆ. ಸೌಂದರ್ಯ ನಮ್ಮಲ್ಲಿದಿದ್ದರೂ ಸೌಂದರ್ಯದ ಕಲ್ಪನೆ ಆದರೂ ಇದೆ. ತೇಜಸ್ಸು ನಮ್ಮಿಂದ ಹೊರ ಹೊಮ್ಮದಿದ್ದರೂ ತೇಜಸ್ಸಿನ ಪ್ರಭೆಯಾದರೂ ನಮ್ಮ ಮೇಲೆ ಬಿದ್ದಿದೆ. ನಮ್ಮ ಜೀವನವೂ ಮಾನವರೆಲ್ಲರ ಜೀವನದಂತೆಯೋ ಸುಖದಲ್ಲಿ ದುಃಖವುಳ್ಳದ್ದು ಹಗಲುಗನಸುಗಳನ್ನು ಕಾಣುವವನಿಗೆ ಸುಖವಿಲ್ಲದಿದ್ದರೂ ಕೂಡ ಅವನಷ್ಟು ಸುಖಿ ಮತ್ತೊಬ್ಬನಿಲ್ಲ ಎಂದು ಹೇಳುತ್ತಾರೆ.

**ಹೂವುಗಳು :**

ಈ ಪ್ರಬಂಧದ ವಸ್ತು ಹೂವುಗಳು ಲೇಖಕರು ಪ್ರಬಂಧದ ಉದ್ದಕ್ಕೂ ಹೂವುಗಲಳನ್ನು ವೈಭವೀಕರಿಸುತ್ತಾ ಹೋಗಿದ್ದಾರೆ. ಹೂವುಗಳು ಹಿಂದಿನಿಂದ ಇಂದಿನವರೆಗೂ ಮಹತ್ವವನ್ನು ಪಡೆದುಕೊಂಡು ಬಂದಿದೆ, ಇಂದಿನ ಆಧುನಿಕ ಯುಗದಲ್ಲಿ ಹೂವುಗಳನ್ನು ನೋಡಿ ಮನಸೋಲದವರೇ ಇಲ್ಲ ಅಲ್ಲದೇ ವಿವಾಹ ಪೂಜಾಕಾರ್ಯಕ್ರಮ ಸಭೆ ಸಮಾರಂಭಗಳು ಮುಂತಾದ ಕಾರ್ಯಕ್ರಮಗಳಲ್ಲಿ

ಹಲವು ಒಗೆಯ ಹೂವುಗಳು ಕಂಗೊಳಿಸುತ್ತಿರುತ್ತವೆ. ಇಂತಹ ಹೂವುಗಳ ಬಗ್ಗೆ ಅವುಗಳ ಸೌಂದರ್ಯದ ಬಗ್ಗೆ ಪ್ರಬಂಧದಲ್ಲಿ ಲೇಖಕರು ವರ್ಣಿಸಿದ್ದಾರೆ. ಲೇಖಕರು ಇಲ್ಲಿ ನಕ್ಷತ್ರಗಳಿಗೂ ಹೂವುಗಳಿಗೂ ಹೋಲಿಕೆ ಮಾಡಿ ನೋಡುತ್ತಾರೆ.ನಕ್ಷತ್ರಗಳು ಕಾಲದ ಹಿಡಿತಕ್ಕೆ ಸಿಕ್ಕದೇ ನಿತ್ಯವಾದವುಗಳು ಅವುಗಳಿಗೆ ಜರೆಯಿಲ್ಲ ಮರಣವಿಲ್ಲ ಅವು ಬಿಸಿಲು ಮಳೆ ಚಳಿ ಗಾಳಿಗಳ ಹೊಡೆತಕ್ಕೆ ಸಿಕ್ಕವು ಅವು ಪ್ರಪಂಚದಲ್ಲಿ ಏನೇ ಅನಾಹುತವಾದರೂ ಅಚ್ಚಳಿಯದೇ ತಮ್ಮ ಕಾಂತಿಯನ್ನು ಬೀರುತ್ತಿರುತ್ತದೆ.ಆದರೆ ಹೂವುಗಳು ನಮ್ಮಂತೆಯೋ ಜನನ ಮರಣಗಳನ್ನು ಉಳ್ಳವು ಪ್ರಾಯದಿಂದ ಉಬ್ಬಿ ಅರಳುವವು ಮುಪ್ಪಿನಿಂದ ಕುಗ್ಗಿ ಕಾಂತಿಹೀನವಾಗುವವು. ಈ ಪ್ರಪಂಚದಲ್ಲಿ ಸಹಜವಾದ ಜೀವನ ಕ್ರಿಯದಲ್ಲಿ ಮನಷ್ಯರಂತೆಯೋ ಅವುಗಳು ಕೂಡ ಎಂದು ಮನುಷ್ಯರಿಗೇ ಹೋಲಿಸುತ್ತಾರೆ.

ನಾವು ಒಂದು ದಿನವೆಂದು ಕೇವಲವಾಗಿ ಹೇಳುವುದು ಹೂವುಗಳಿಗೆ ಒಂದು ಜೀವಮಾನದ ಕಾಲ ಅವು ತಮಗಿರುವ ಅಲ್ಪಾಯಸ್ಸನ್ನು ಆನಂದದಿಂದ ಕಳೆಯುತ್ತದೆ. ಅವುಗಳಿಗೆ ಮನುಷ್ಯರಂತೆ ಇಂದು ನಾಳೆಗಳ ಯೋಚನೆಗಳಲ್ಲ ಹೂವುಗಳಿಗೆ ನಮ್ಮಂತೆ ಯಾವುದೇ ಚಿಂತೆಯಿಲ್ಲಾ ಅವು ಯಾವುದೇ ರೀತಿ ಯೂತನೆಗು ಒಳಗೊಳ್ಳವುದಿಲ್ಲ. ಬದಲಿಗೆ ಆ ಒಂದು ದಿನವನ್ನು ಹರ್ಷದಿಂದ ಕಳೆಯುತ್ತದೆ. ಎಂದು ಲೇಖಕರು ಹೇಳುತ್ತಾರೆ ಹೂವುಗಳ ಬಗ್ಗೆ ಮುಂದುವರೆದು ಹೇಳುತ್ತಾ ಹೂವುಗಳ ಸೌಂದರ್ಯವನ್ನು ಸುವಾಸನೆಯನ್ನು ಗಿಡದ ಮೇಲೆಯೋ ನೋಡಿ ಅನುಭವಿಸಬೇಕಲ್ಲದೆ. ಅದನ್ನು ಕಿತ್ತು ಬಾಡಿಸಬಾರದೆಂದು ಲೇಖಕರು ಹೇಳುತ್ತಾರೆ.

ಇನ್ನು ಹಲವು ಬಗ್ಗೆಯ ಹೂವುಗಳ ಗುಣಗಳನ್ನು ಲೇಖಕರು ಹೇಳುತ್ತಾ ಹೋಗುತ್ತಾರೆ. 'ಕಮಲದ ಹೂ' ಏನೋ ಒಂದು ಒಗೆಯ ಗಾರುಡೀ ವಿದ್ಯೆಯಿಂದ ಕವಿಗಳ ಮತ್ತು ಸಾಧರಣ ಜನರ ಮನಸ್ಸು ಬೇರೊಂದು ಕಡೆ ಹೋಗದಂತೆ ಮಾಡಿದೆ. 'ಗುಲಾಬಿ' ಪರದೇಶದ ಹೂವಾದರು ಇಲ್ಲಿ ಒಂದು ರಾಜ್ಯವನ್ನು ಕಟ್ಟಿದೆ. ಅದನ್ನು ನೋಡಿದಾಗ ಮನಸ್ಸು ಈ ಪ್ರಪಂಚವನ್ನು ಬಿಟ್ಟು ಬೇರೇಂದು ಕಲ್ಪನಾ ಪ್ರಪಂಚದಲ್ಲಿ ಅಲೆಯುವಂತೆ ಮಾಡುತ್ತದೆ. ಗುಲಾಬಿ ಹೂವಿನ ಬಣ್ಣ ಮಂಟ ಕಂಪು ಎಲ್ಲವನ್ನು ನೋಡಿದರೆ ಅದಕ್ಕೆ ಸರಿಸಮವಾದ ಹೂವು ಮತ್ತೊಂದಿಲ್ಲ.

ಆದ್ದರಿಂದಲೆ ' ಗುಲಾಬಿ ಹೂವುಗಳ ರಾಣಿ' ಎಂದು ಹೇಳುತ್ತಾ ಪರಿಮಳದಲ್ಲಿಯು ನಮ್ರತೆಯಲ್ಲಿಯು ಸೌಜನ್ಯದಲ್ಲಿಯು ಸೌಶಿಲ್ಯದಲ್ಲಿಯು ಇತರ ಹೂವುಗಳನ್ನು ಮೀರಿಸಿದೆ. ಹಾಗೆಯೋ 'ಜಾಜಿ' ಯ ಬಗ್ಗೆ ಹೇಳುತ್ತಾ ಸ್ತ್ರೀಯು ಸಹಜವಾದ ಕೋಮಲತೆ ಲಜ್ಜೆ ಸೌಂದರ್ಯ ಇವು ಜಾಜಿಯಲ್ಲಿ ತುಂಬಿರುವವು ಜಾಜಿಯ ಹೂವು ಆ ರಾಜ ಪುತ್ರಿಯರ ಹಾಗೆ ಒಳ್ಳೆಯ ಮೇಲೆಯೋ ಅದರ ಸೊಬಗನ್ನು ನೋಡಿ ಆನಂದ ಪಟ್ಟು ಗಾಳಿಯು ಕದ್ದು ತಂದಷ್ಟು ಪರಿಮಳವನ್ನು

ಅನುಭವಿಸಬೇಕು. ಜಾಜಿ ಪಾರಿಜಾತ ಇಂತಹ ಹೂವುಗಳನ್ನು ಕುಯ್ದು ಕಟ್ಟಿ ಮುಡಿಯುಲವವರು ಕ್ರೂರಕರ್ಮಿಗಳು ಎಂದು ಲೇಖಕರು ಹೇಳುತ್ತಾರೆ. ' ಸಂಪಿಗೆ' ಹೂವಿನ ಪರಿಮಳವು ಎಲ್ಲ ಹೂವುಗಳ ಸುವಾಸನೆಯನ್ನು ದಾಟಿ ನಾವು ಎಷ್ಟು ದೂರ ಹೋದರು ಬಿಡದೇ ಅಟ್ಟಿಸಿಕೊಂಡು ಬಂದು ಮುತ್ತಿಗೆ ಹಾಕಿ ಗೆದ್ದು ಜಯಭೇರಿಯನ್ನು ಹೊಡೆಯುವುದೆಂದು ಹೇಳುತ್ತಾರೆ.

ಹೂವುಗಳ ಪ್ರಪಂಚ ಪರಿಮಳಯುಕ್ತವಾದ ಮಕರಂದದ ಪ್ರಪಂಚ ಅವು ನಮಗೆ ಎಷ್ಟು ಹತ್ತಿರವಾದರು ನಾವು ನಾಗರೀಕತೆಯ ನೂರೆಂಟು ಹಂಬಲಗಳಲ್ಲಿ ಅದನ್ನು ದೂರ ಮಾಡಿ ಕೊಂಡಿದ್ದೇವೆ. ಸುತ್ತಲು ಸೌಂದರ್ಯವೇನೂ ತುಂಬಿದೆ. ನೋಡಲು ಕಣ್ಣು ಬೇಕು ಅದನ್ನು ಅನುಭವಿಸಲು ತಕ್ಕ ಮನೋವೃತ್ತಿ ಬೇಕಾಗಿದೆ. ಎಂದು ಲೇಖಕರು ಹೇಳುತ್ತಾರೆ.

**ಗಾಡಿಯ ಪ್ರಯಾಣ:-**

ಈ ಪ್ರಬಂಧದ ವಸ್ತು ' ಎತ್ತಿನಗಾಡಿ' ತಮ್ಮ ಎತ್ತಿನ ಗಾಡಿಯ ಪ್ರಯಾಣದ ದೂರವನ್ನು ಅಂದರೆ ಅನುಭವವನ್ನು ಕುರಿತು ಲೇಖಕರು ಹೇಳಿದ್ದಾರೆ. ಪ್ರಮಾಣದಲ್ಲಿ ಒಂದು ರೀತಿಯ ಸಂತೋಷವಿರುತ್ತದೆ. ಮೇಲೆ ತಿಳಿಯಾದ ನಕ್ಷತ್ರ ಮಂಡಿತವಾದ ಆಕಾಶ ಮುಂದೆ ಬೆಳದಿಂಗಳಿನ ನೆರಳಿನಲ್ಲಿ ನುಸುಳಿಕೊಂಡು ಹೊಗುವ ರಸ್ತೆ; ಮೃದುವಾಗಿ ಬೀಸುವ ತಂಗಾಳಿ; ಎತ್ತುಗಳ ಕೊರಳಿನಲ್ಲಿರುವ ಗೆಜ್ಜೆಯ ಶಬ್ದ ಇವುಗಲಳನ್ನು ನೆನೆಸಿಕೊಂಡರೆ ಗಾಡಿಯ ಪ್ರಮಾಣವೇ ಹಿತ ಆದರೆ ಇಂದಿನ ವೇಗದ ಜೀವನದಲ್ಲಿ ಘಂಟೆಗೆ ಎರಡು ಮೈಲಿ ಹೋಡುವ ಎತ್ತಿನಗಾಡಿಯನ್ನು ಯಾರು ತಾನೇ ಕೇಳುವರು? ಏನಿದ್ದರೂ ಸಮಯವನ್ನು ಉಳಿಸುವ ರೈಲು ಮೋಟಾರುಗಳೇ ಇಂದಿನ ಜನರಿಗೆ ಬೇಕಾಗಿದೆ. ಇಲ್ಲಿ ಲೇಖಕರು ರೈಲು ಗಾಡಿಗೂ ಎತ್ತಿನ ಗಾಡಿಗೂ ಹೊಲಿಕೆ ಮಾಡಿ ಯಾವುದು ಯಾವ ರೀತಿ ಒಳ್ಳೆಯದೆಂದು ತಿಳಿಸುತ್ತಾರೆ. ನಾವು ಪ್ರಯಾಣಿಸುವಾಗ ದಾರಿ ಮಧ್ಯೆಸಿಗುವ ಹಲವಾರು ಸ್ಥಳಗಳು ಇಷ್ಟವಾಗಬಹುದು ಅಂತಹ ಸಂದರ್ಭದಲ್ಲಿ ಎತ್ತಿನಗಾಡಿಲ್ಲಾದರೇ ಅದನ್ನು ನಿಲ್ಲಿಸಿ ಆ ಪ್ರಕೃತಿಯ ಸೌಂದರ್ಯವನ್ನು ಸವಿಯಬಹುದು ಆದರೆ ರೈಲುಗಾಡಿ ನಮ್ಮ ಮಾತನ್ನು ಕೇಳುವುದಿಲ್ಲ ನಮಗೆ ಒಂದು ಸುಂದರ ಜಲಪಾತ ಕಾಣುತ್ತದೆ. ಅಲ್ಲಿ ಸ್ವಲ್ಪಹೊತ್ತು ವಿರಮಿಸಬೇಕೆನಿಸಿ ರೈಲುಗಾಡಿಯನ್ನು ನಿಲ್ಲಲು ಹೇಳಿದರೆ ಅದು ನಿಲ್ಲುವುದಿಲ್ಲ. ಬದಲಾಗಿ ಒಂದು ನಿರ್ದಿಷ್ಟ ಸ್ಥಳದಲ್ಲಿ ಮಾತ್ರ ನಿಲ್ಲುತ್ತದೆ. ಗಾಡಿಯ ಪ್ರಯಾಣದಲ್ಲಿ ಈ ಕಷ್ಟವಿಲ್ಲ ಗಾಡಿ ಹೊಡೆಯುವವನು ರೈಲಿನ ಡ್ರೈವರಿನಂತೆ ಕೇವಲ ನಿಯಮ ಬದ್ಧನಲ್ಲ ಅವನು ನಮ್ಮಂತೆಯೊ ಆಸೆ ಉತ್ಸಾಹಗಳ್ಳುಳ್ಳ ಮಾನವ ಬೀಡಿಗೆ ಮೂರು ಕಾಸು ಕೊಟ್ಟರಂತೂ ಆತ ನಾವು ಹೇಳಿದ ಹಾಗೆ ಕೇಳುತ್ತಾನೆ. ಗಾಡಿಯಲ್ಲಿ ಪ್ರಯಾಣ ಹೊರಡುವವರಿಗೆ ಆತುರವಿಲ್ಲ. ರೈಲಿಗೆ ಹೊರಡುವಾಗ ಗಡಿಬಿಡಿಯೆಷ್ಟು ಹೆಂಗಸರು ಬೇಗ ಸಿದ್ಧವಾಗಿಲ್ಲವೆಂದು ಬೆದರಿಕೆಯಷ್ಟು! ಬೈಗುಳಿಷ್ಟು! ಬೈಗುಳಷ್ಟು!

ಮಕ್ಕಳಿಗೆ ಏಟುಗಳೆಷ್ಟು! ಈ ಗಡಿಬಿಡಿ ಇಲ್ಲದಿದ್ದರೆ ರೈಲು ಸಿಗುವುದು ಅಸಾಧ್ಯ ಎಷ್ಟೋ ವೇಳೆ ರೈಲು ನಾವು ಸ್ಟೇಷನ್ನಿಗೆ ಬರುವವರೆಗೂ ಕಾದಿದ್ದು ಬಾಗಿಲು ದಾಟಿ ಒಳಗೆ ಕಾಲಿಡುವುದರಲ್ಲಿ ಹೊರಟುವವರಿಗೆ ಒಂದು ವಿಧವಾದ ಆತುರವಿಲ್ಲದ ಸಂಭ್ರಮ ಮಾತ್ರ ಇರುತ್ತದೆ.

ಪ್ರಯಾಣ ಹೊರಡುವಾಗ ದಾರಿಯಲ್ಲಿ ಹಲವಾರು ವಿಪತ್ತುಗಳು ಸಂಭವಿಸಬಹುದು. ಆದ್ದರಿಂದ ಮನೆಯಲ್ಲಿ ಯಾರಾದರೂ ಪ್ರಯಾಣ ಹೊರಟರೇ ಬಂಧುಗಳು ಕಣ್ಣೀರು ಬಿಡುತ್ತಾ ಬಹಳ ದೂರ ಗಾಡಿಯ ಹಿಂದೆ ಬರುತ್ತಿದ್ದುದು ಉಂಟು " ದಾರಿಯಲ್ಲಿ ಹುಷಾರಾಗಿರು" ಆ ಮಗು ತುಂಟ ಮಗು ಕೈಯಿಂದ ಚಿಮ್ಮಿಕೆಳಕ್ಕೆ ಬಿದ್ದೀತು" "ಹೊಳೆ ದಾಟುವಾಗ ಜೋಕೆ ಒಬ್ಬರು ಇಳಿದು ಗಾಡಿಯನ್ನು ಹಿಡಿದುಕೊಂಡೇ ನಡೆಯಿರಿ" [2] ಎಂಬ ಎಚ್ಚರಿಕೆಯ ಮಾತುಗಳನ್ನು ಕೇಳುತ್ತೇವೆ. ಅಲ್ಲದೇ ಲೇಖಕರು ತಾವು ಮೈಸೂರಿನಿಂದ ತಮ್ಮ ಊರಿಗೆ ರಾತ್ರಿ ಸಮಯದಲ್ಲಿ ಗಾಡಿಯಲ್ಲಿ ಬರುವ ಪ್ರಯಾಣದ ಕುರಿತು ಹೇಳುತ್ತಾರೆ ಲೇಖಕರು ಊರಿಗೆ ಹೋಗುವುದಕ್ಕಿಂತಲೂ ಪ್ರಯಾಣದಲ್ಲಿಯೋ ಹೆಚ್ಚು ಉತ್ಸಾಹವಂತೆ ಎಷ್ಟೇ ಸ್ವಾತಂತ್ರ್ಯವಿದ್ದರೂ ಹಳ್ಳಿಯಲ್ಲಿ ಮನೆಯವರ ಅಂಕೆಯುಂಟು. ಆದರೆ ದಾರಿಯಲ್ಲಿ ನಾವೇ ಸರ್ವಸ್ವತಂತ್ರ್ಯರು ಎಂದು ಹೇಳುತ್ತಾರೆ.

ಅಲ್ಲದೇ ರಾತ್ರಿ ಹೊತ್ತು ಹೋಗುವ ಗಾಡಿ ಪ್ರಯಾಣದಲ್ಲಿ ಕಳ್ಳರ ಕಾಟ ಜಾಸ್ತಿ ಇಂಥಹ ಸಂದರ್ಭದಲ್ಲಿ ಗಾಡಿಯವನು " ಎಚ್ಚರವಾಗಿಉದ್ದಿರ ಸ್ವಾಮಿ ಒಸಿ ಹುಷಾರಾಗಿರಿ ಮುಂಜಿ ಮಾಡುವ ಜಾಗ ಇದು" ಎಂದು ಎಚ್ಚರಿಸುತ್ತಿದ್ದನಂತೆ ಅಷ್ಟೇ ಅಲ್ಲದೇ ಗ್ರಾಮೀಣ ಜನರು ಈಗಲು ನಂಬುವ ದೆವುಗಳ ಕಾಟದ ಬಗ್ಗೆ ಜಡೆಮುನಿಯ ಅಪಾಯದಿಂದ ಬಗ್ಗೆ ಲೇಖಕರು ಹೇಳುತ್ತಾರೆ. ಇಂತಹ ತೊಂದರೆಗಳಿಂದ ತಪ್ಪಿಸಿಕೊಳ್ಳಲು ಹಲವಾರು ಎತ್ತಿನಗಾಡಿಗಳು ಒಟ್ಟಿಗೆ ಪ್ರಯಾಣಿಸುತ್ತಿದ್ದವು. ಅದರಲ್ಲಿ ಏನೋ ಒಂದು ರೀತಿಯ ಸಂತೋಷ ಸಿಗುತಿತ್ತು.

ಆದರೆ ಇಂದಿನ ಜೀವನದ ಸಮಯವೂ ಆತುರದಿಂದ ಕೂಡಿದೆ. ನಾವು ಒಂದು ಘಳಿಗೆ ಒಂದು ಕಡೆ ನಿಲ್ಲಲಾರದೇ ಅಲೆಯುತ್ತಿದ್ದೇನೆ. ಈಗಿನ ಕಾಲದಲ್ಲಿ ಬೇಗ ಎಲ್ಲವೂ ಸಿಗಬೇಕೆಂಬ ಬಯಕೆ ಹಾಗು ವೇಗ ಹೆಚ್ಚು ಸಂಪತ್ತು ಹೆಚ್ಚು ಆದರೆ ಇವುಗಳು ಇದ್ದ ಮಾತ್ರಕ್ಕೆ ಸೌಖ್ಯ ಹೆಚ್ಚೆಂದು ಹೇಳಲಾಗುವುದಿಲ್ಲ ಒಂದೂರಿನಿಂದ ಇನ್ನೊಂದೂರಿಗೆ ಹತ್ತು ಘಂಟೆಯಲ್ಲಿ ಹೋಗುವುದಕ್ಕೆ ಬದಲಾಗಿ ಒಂದೇ ಘಂಟೆಯಲ್ಲಿ ಹೋದ ಮಾತ್ರಕ್ಕೆ ನಮ್ಮ ಸೌಖ್ಯವೇನೂ ಹೆಚ್ಚುವುದಿಲ್ಲವೆಂದು ಹೇಳುತ್ತಾರೆ ಇಂದು ಎತ್ತುಗಳ ಕೊರಳಿನ ಗೆಜ್ಜೆಯ ಶಬ್ದ ಸಂಪೂರ್ಣವಾಗಿ ನಿಂತುಹೋಗಿ ಮೋಟಾರಿನ ಕೂಗು ಮಾತ್ರ ಕೇಳುತ್ತಿದೆ. ಇದು ಕಾಲಕ್ಕೆ ತಕ್ಕಂತೆ ನಡೆಯುತ್ತಿರುತ್ತದೆ. ಆದರೆ ಸೌಧಗಳಲ್ಲಿ ವಾಸಿಸುವವರಿಗೆಆಗಾಗ

––– ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 27

ಮರದ ನೆರಳು ರುಚಿಸುವಂತ ಮೋಟಾರಿನಲ್ಲಿ ತಿರುಗವವರಿಗೂ ಒಂದೊಂದು ವೇಳೆ ಗಾಡಿಯ ಪ್ರಯಾಣವು ರುಚಿಸಬಹುದೆಂದು ಹೇಳುತ್ತಾರೆ. ಲೇಖಕರಿಗೆ ಮೋಟಾರಿನ ಪ್ರಯಾಣಕ್ಕಿಂತಲೂ ಗಾಡಿಯ ಪ್ರಯಾಣವೇ ಹೆಚ್ಚು ಇಷ್ಟವಂತೆ. ಬೆಳದಿಂಗಳಿನಲ್ಲಿ ನೆನೆದು ಹರಿಯುತ್ತಿರುವ ಹುಣ್ಣಿಮೆಯ ರಾತ್ರಿ ಮರಗಳ ನಡುವೆ ಸುತ್ತಿ ಸುತ್ತಿಕೊಂಡು ಹೋಗುವ ರಸ್ತೆ. ಒಳ್ಳೆಯ ಜಾತಿಯ ಎತ್ತುಗಳು. ತುಯ್ಯುತ್ತಿರುವ ಗಾಡಿ ಜೊತೆಯಲ್ಲಿ ನನ್ನ ನಲ್ಲೆಯೂ ಇದ್ದರೆ ಪ್ರಯಾಣವು ನಿಧಾನವಾದರೇನು. ನಿಶ್ಚಿತ ಸ್ಥಳವನ್ನು ಎಂದು ತಲುಪಿದರೇನು ಎಂದು ಗಾಡಿಯ ಪ್ರಯಾಣವನ್ನು ಲೇಖಕರು ಇಷ್ಟ ಪಡುತ್ತಿದ್ದರು

**ಕುರುಡ** :

ಈ ಪ್ರಬಂಧದ ವಸ್ತು ಕುರುಡ. ಪ್ರಬಂಧದುದ್ದಕ್ಕೂ ಕುರುಡನ ಮೇಲಿನ ಅನುಕಂಪದ ಕುರಿತು ಚಿರ್ತಿಸಿದ್ದಾರೆ. ಇಲ್ಲಿ ಕೆಲವು ಕಡೆ ಲೇಖಕರು ಲಲಿತೆ ಎಂಬ ಪದವನ್ನು ಬಳಸುತ್ತಾರೆ. ಅದು ಅವರ ಹೆಂಡತಿಯ ಹೆಸರಾಗಿದೆ.

ಒಂದು ದಿನ ಮಳೆಯು ಸಣ್ಣದಾಗಿ ಹನಿಯುತ್ತಿತ್ತು ಈ ಸಂಧರ್ಭದಲ್ಲಿ ಲೇಖಕರ ಮಗ ಸುಬ್ಬು ಹೊರಗೆ ಯಾರನ್ನೋ ಗದರಿಗೊಳ್ಳುತ್ತಿದ್ದುದು ಗೊತ್ತಾಗಿ ಬಾಗಿಲಿನ ಕಡೆ ತಿರುಗಿ ನೋಡುತ್ತಾರೆ. ಬೀದಿಯ ಬಾಗಿಲಿನ ಬಳಿ ಪಾಪ ಕಣ್ಣಿಲ್ಲದ ಕುರುಡ ನಿಂತಿದ್ದನು.ಆತನಿಗೆ ಸುಮಾರು ನಲವತ್ತೈದು ವರ್ಷವಿರಬಹುದು. ಅಲ್ಲದೆ ಆತನ ಮುಖದ ತುಂಬಾ ಸಿಡುಬಿನ ಕಲೆಗಳಿದ್ದವು ಆತ ಹಾಕಿದ್ದ ಬಟ್ಟೆಯು ಎರಡು ಮೂರು ದಡೆ ತೇಪೆ ಬಿದ್ದಿದ್ದು ಮಳೆಯಲ್ಲಿ ಸ್ವಲ್ಪ ನೆನೆದಿದ್ದ ಹರಕು ಷರಟನ್ನು ಹಾಕಿಕೊಂಡು ಚಳಿಯಿದ್ದರಿಂದ ಮೈಯನ್ನು ಸ್ವಲ್ಪ ಹುದುಗಿಸಿಕೊಂಡು ನಿಂತಿದ್ದನು ಆತನ ಜೊತೆಗೆ ಬೆರಳಗಲ ಅಂಚಿನ ಸೀರೆಯನ್ನುಟ್ಟಿದ್ದ ಮುದುಕಿಯೊಬ್ಬಳೂ ಅವನ ಜೊತೆಯಲ್ಲಿದ್ದಳು. ಅವರಿಬ್ಬರೂ ಬಹಳ ಹೊತ್ತು ನಡೆದು ದಣಿದಂತೆ ಕಾಣುತಿತ್ತು.

ಮನೆಗೆ ಯಾರಾದರೂ ಬಂದರೇ ಅವರಿಗೆ ಜವಾಬು ಹೇಳುವ ಕರ್ತವ್ಯ ಸುಬ್ಬುವಿನದು. ಆತ ಆ ದಿನ ಅವರಿಗೆ ಮಾತನಾಡುವುದಕ್ಕೂ ಕೊಡದೇ " ಮುಂದಕ್ಕೆ ಹೋಗಿ" ಎಂದು ಹೇಳಿ ಬಿಡುತ್ತಾನೆ. ಅದನ್ನು ನೋಡಿದ ಲೇಖಕರಿಗೆ ದುಃಖ ಉಮ್ಮಳಿಸಿ ಬಂದು " ಯಾರಪ್ಪ ನೀವು" ಎಂದು ಕೇಳಿದಾಗ. ಆಕೆ ಕುರುಡನನ್ನು ತೋರಿಸುತ್ತಾ ಕುಗ್ಗಿದ ಸ್ವರದಿಂದ " ಎರಡೂ ಕಣ್ಣು ಇಲ್ಲವಪ್ಪ ಏನಾದರೂ ಸಹಾಯ ಮಾಡಿ" ಎನ್ನುತ್ತಾಳೆ. ಜೇಬಿನಲ್ಲಿದ್ದ ಎರಡಾಣೆಯನ್ನು ಅವಳ ಕೈಗೆ ಕೊಟ್ಟು ರೂಮಿಗೆ ಹೋಗಿ ಬಿಡುತ್ತಾರೆ. ತಕ್ಷಣ ಅವರ ಹೆಂಡತಿ ಲಲಿತೆ ಬಂದು "ಅಗಸನ ಮನೆಯಿಂದ ಬಂದ ನಿಮ್ಮ ಜುಂಗಿನ ಷರಟೆಲ್ಲಿ? ಯಾವನೋ ಕುರುಡ ಬಂದಿದ್ದಾನೆ: ಪಾಪ ಅವನ

ಷರಟೆಲ್ಲಾ ಹರಕು ಮಳೆಯಲ್ಲಿ ನೆನೆದು ಹೋಗಿದೆ. ನೀವೂ ಹೇಗಿದ್ದರೂ ಜುಂಗಿನ ಷರಟು ಹಾಕಿಕೊಳ್ಳುವುದಿಲ್ಲವಲ್ಲ ಅವನಿಗಾದರೂ ಕೊಡುತ್ತೇನೆ" [3] ಎಂದರು. ಆಗ ಷರಟಿನ ಕಡೆಗೆ ಕೈ ಮಾಡುವರು. ಆಗ ಲೇಖಕರಿಗೆ ಕುರುಡನು ತುಂಬಾ ಕಷ್ಟವೆನಿಸ ತೊಡಗಿದನು ಆ ಹುಟ್ಟು ಕುರುಡನಿಗೆ ಹೆಣ್ಣು ಕೊಡುವವರಾರು! ಅವನ ತಾಯಿಯ ಸಂಕಟ ವೆಷ್ಟಿರಬೇಕು! ಅವನನ್ನು ನೋಡಿದ ನನ್ನ ಅಪರಿಚಿತ ಹೃದಯದಲ್ಲೇ ನೋವಾದರೇ ಇನ್ನು

ಹೊತ್ತು ಹೆತ್ತು ಸಾಕಿದ ಆ ವೃದ್ದೆಯ ಹೃದಯದಲ್ಲಿ ಎಷ್ಟು ನೋವಿರಬೇಕೆಂದು ಮರುಗುತ್ತಾರೆ. ಹೀಗಿರುವಾಗ ಲೇಖಕರ ಹೆಂಡತಿ ಅರ್ಧದಲ್ಲಿ ನಿಂತಿದ್ದ ಪಗಡೆಯಾಟ ಆಡಲು ಬರುತ್ತಾರೆ. ಅಂದು ಲಲಿತೆಯು ಆಟದ ವಿಷಯವಾಗಿ ಹೆಚ್ಚು ಹಾಸ್ಯವನ್ನು ಮಾಡದೇ ಸುಮ್ಮನಿದ್ದುದನ್ನು ನೋಡಿ " ಇದೇನು ಇಷ್ಟೋಂದು ಮೌನ" ಎಂದು ಕೇಳುವರು. ಅದಕ್ಕೆ ಆಕೆ " ಏನೂ ಇಲ್ಲಿ ಆ ಕುರುಡನ ಜೊತೆಯಲ್ಲಿ ಮುದುಕಿ ಬಂದಿದ್ದರಲ್ಲಿ. ಅವರೇನೋ ತಮ್ಮ ಕಷ್ಟ ಹೇಳಿಕೊಂಡರೂ. ಅದೇ ಮನಸ್ಸಿನಲ್ಲಿತ್ತು" ಎನ್ನುವರು ನಾನು ಕೊಠಡಿಗೆ ಕರೆದು ಸ್ವಲ್ಪ ಹೊತ್ತು ಮಾತನಾಡಿ ಅನಂತರ ಷರಟನ್ನು ಕೊಟ್ಎನು. ಆ ಬಿಕ್ಷುಕ ಮೂರು ವರ್ಷದ ಮಗುವಾಗಿದ್ದಾಗಲೇ ಸಿಡುಬು ಎದ್ದು ಎರಡೂ ಕಣ್ಣುಗಳೂ ಹೋಗಿ ಬಿಟ್ಟವಂತೆ. ಅದಾದ ಸ್ವಲ್ಪ ದಿನಗಳಲ್ಲೇ ಅವನ ತಂದೆ ಪ್ಲೇಗಿಗೆ ತುತ್ತಾದರಂತೆ ಆಗಿನಿಂದಲೂ ಮಗನ ಭಾರ ತಾಯಿಯ ಮೇಲೆ ಬಿದ್ದಿದೆ. ಎಂದು ಕೊರಗುವಳೂ. ಲೇಖಕರಿಗೆ ಲಲಿತ ಬಿಕ್ಷುಕರ ಕಥೆಯನ್ನು ಹೇಳುವುದಕ್ಕೆ ಮುಂಚೆಯೇ ಅವರಿಗಾಗಿ ಮರುಗಿ ಎರಡಾಣೆಯನ್ನು ಕೊಟ್ಟಿದ್ದರು. ಇಲ್ಲಿ ಲೇಖಕರು ಕೊಟ್ಟ ದುಡ್ಡಗಿಂತಲೂ ಲಲಿತೆ ಕೊಟ್ಟ ಬಟ್ಟೆಗಿಂತಲೂ ಅವಳೂ ಆಡಿದ ನಾಲ್ಕು ಮಾತುಗಳೂ ಮುದುಕಿಗೆ ಹೆಚ್ಚು ಸಂತೋಷ ಉಂಟು ಮಾಡಿದ್ದವು.

ಈ ಪ್ರಬಂಧದ ಆಶಯವನ್ನು ನೋಡಿದಾಗ ಹಣ ಮಖವಲ್ಲಿ, ಒಂದು ಹೃದಯದ ನೋವನ್ನು

ಅರ್ಥ ಮಾಡಿಕೊಳ್ಳುವ ಮತ್ತೊಂದು ಹೃದಯ ಮುಖ್ಯ ಅಲ್ಲದೆ ಕಷ್ಟದ ಸಮಯದಲ್ಲಿ ಮನಸ್ಸನ್ನು ಸಮಾಧಾನಿಸುವ ಎರಡು ಪ್ರೀತಿಯ ಮಾತುಗಳು ಮುಖ್ಯವೆಂಬುದು ತಿಳಿಯುತ್ತದೆ. ಎಂಬುದು ಲೇಖಕರ ಅನಿಸಿಕೆಗಳೂ

<u>ಲಲಿತೆಯ ವಿಧ್ಯಾಭ್ಯಾಸ</u> :

ಈ ಪ್ರಬಂಧದ ವಸ್ತು ಲಲಿತೆಯ ವಿಧ್ಯಾಭ್ಯಾಸ ಲಲಿತೆ ಲೇಖಕರ ಹೆಂಡತಿ. ಲಲಿತೆ ಲೇಖಕರನ್ನು ಮದುವೆಯಾಗುವುದಕ್ಕೂ ಮೊದಲು ಸ್ಕೂಲಿಗೆ ಹೋಗುತಿದ್ದಳೂ ಆದರೆ ಆ ನಂತರ ಮೇಷ್ಟರಿಗೂ ಲಲಿತೆಯ ತಂದೆಗೂ ಜಗಳವಾಗಿ ಸ್ಕೂಲನ್ನು ಬಿಟ್ಟುಬಿಡಿರುತ್ತಾಳೆ. ಈ ವಿಷಯ

ಲೇಖಕರಿಗೆ ಮದುವೆಯಾದ ವರ್ಷದ ಮೇಲೆ ತಿಳಿದು ಅವಳಿಗೆ ಇಂಗ್ಲೀಷನ್ನು ಓದುವುದಕ್ಕೂ ಬರೆಯುವುದಕ್ಕೂ ಬಾರದಿರುವುದನ್ನು ಕಂಡು ಬೇದ ಉಂಟಾಗುತ್ತದೆ. ಲಲಿತೆಗೆ " ಒಂದು ಬೆಕ್ಕು ಒಂದು ಇಲಿಯ  ಕಡೆಗೆ ಓಡಿತು" ಎಂದು ಇಂಗ್ಲೀಷ್ ನಲ್ಲಿ ಬರೆಯುವುದಕ್ಕೆ ಬರುತ್ತಿರಲಿಲ್ಲ. ಇದು ಲೇಖಕರಿಗೆ ಬಹಳ ಅಸಮಾಧಾನ ಉಂಟುಮಾಡಿತ್ತು " ಈ ಇಪ್ಪತ್ತನೆಯ ಶತಮಾನದಲ್ಲಿ ಸಹ ನಾಗರೀಕರೆಂದು ಹೇಳುವ ನಾವು ಹೆಂಗಸರನ್ನು ಅಜ್ಞಾನ ರೂಪದಲ್ಲಿಯೇ ಇಟ್ಟರುವುದನ್ನು ನೋಡಿದರೆ ರಕ್ತ ಕುದಿಯುತ್ತದೆ. ನಾವು ಸಂಪ್ರಕಾಯಕ್ಕೆ ಕಟ್ಟುಬಿದ್ದ ಗುಲಾಮರು. ಹೇಡಿಗಳೂ" ಎಂದು ಲೇಖಕರು ಗರ್ಜಿಸುವ ತಮ್ಮ ದೊಡ್ಡ ಗುಣವನ್ನು ಮೆರೆದಿದ್ದಾರೆ.

ಇನ್ನೂ ಶಿಲ್ಪಿಯ ಕೈಗೆ ಸಿಕ್ಕಿದ ಅಮೃತ ಶಿಲೆಯಂತಿದ್ದ ಲಲಿತೆಗೆ ಕೊನೆಗೆ ತಾವೇ ಉಪಾಧ್ಯಾಯರಾಗಿ ಪಾಠ ಹೇಳಿಕೊಡುವುದಾಗಿ ನಿರ್ಧರಿಸುತ್ತಾರೆ. ನಂತರ ಬೇಸಿಗೆಯ ರಜ ಬಂದ ಮೇಲೆ ಒಂದು ಶುಭ ದಿವಸವನ್ನು ಗೊತ್ತುಮಾಡಿ ವಿಧ್ಯಾಭ್ಯಾಸವನ್ನು ಆರಂಭಿಸಲು ನಿರ್ಧರಿಸುತ್ತಾರೆ. ಬೇರೆ ವಿಷಯಗಳನ್ನು ಹೇಲಿಕೊಡುವುದು ಲೇಖಕರಿಗೆ ಕಷ್ಟವಾದ ಕಾರಣ " ನಿನಗೆ ಮನೆಗೆಸಗಳನ್ನು ಮಾಡಿಕೊಂಡು ಇದನ್ನೆಲ್ಲ ಓದುವುದಕ್ಕಾಗುವುದಿಲ್ಲ. ಸದ್ಯಕ್ಕೆ ಇಂಗ್ಲೀಷೋಂದು ಸಾಕು" ಎಂದು ಹೇಳುತ್ತಾರೆ ಬಿಡುವಿಲ್ಲದ  ಸಮಯದಲ್ಲಿ ಕಲಿಯುವ ಲಲಿತೆ " ನಾನು ಮೆದುಳಿನ ಕೆಲಸಕ್ಕೆ ಕುಳಿತರೆ ಮುಸುರೆ ಕೆಲಸವನ್ನು ನೀವು ಮಾಡುತ್ತಿರಾ"? ಎಂದು ಲಲಿತೆಯು ಹೇಳುವರು. ಅದಕ್ಕೆ ಲೇಖಕರು "ನಿನ್ನ ಮನೆಗಲಸ ಅಷ್ಟರಲ್ಲೇ ಇದೆ.ಬೆಳಿಗ್ಗೆ ಪುರುಸೊತ್ತು ಮಾಡಿಕೋ" ಎನ್ನುವರು . ಹೀಗೆ ಗುರು ಶಿಷ್ಯಯರ ಸಂಬಂದವಾಗಿ ಪ್ರಾರಂಭವಾದ ವಿಧ್ಯಾಭ್ಯಾಸ ಹಲವಾರು ತೋಡಕುಗಳ ನಡುವೆಯೂ ನಡೆಯುತ್ತದೆ. ಲಲಿತೆಗೆ ಪಾಠ ಹೇಳಿಕೊಡುತ್ತಾ ಗಂಡ– ಹೆಂಡತಿಯ ಸಂಬಂಧ ಹೋಗಿ ಉಪಧ್ಯಾಯ - ಶಿಷ್ಯೆಯ ಸಂಬಂಧವೇ ಬಂದುಬಿಟ್ಟಿತ್ತು. ಪಾಠ ಹೇಳಿಕೊಡುವುದು ಮುಗಿದ ಮೇಲೂ ಲಲಿತೆ ಯಾರೋ ಅಪರಿಚಿತರನ್ನು ಕಂಡು ಒಳಗೆ ಹೋಗುವವಳಂತೆ ಎದ್ದು ಹೊರಟು ಹೋಗುತ್ತಿದ್ದಳೂ. ಇದರಿಂದ ಲೇಖಕರಿಗೆ ಅವಳೊಂದಿಗೆ ಸಲುಗೆಯಿಂದ ಮಾತನಾಡಿಸುವುದೇ ಕಷ್ಟವಾಗುತಿತ್ತು. ಇದಾದ ನಂತರ ಕೆಲವು ದಿನ

ಲಲಿತೆಯ ತಂದೆ ಬಂದು "ಮನೆಯಲ್ಲಿ ಕೆಲವು ದಿನ ಇರಲಿ" ಎಂದು ಲಲಿತಳನ್ನು ಕರೆದು ಕೊಂಡು ಹೋದರು.  ಇಲ್ಲಿಂದ ಆಕೆ ಹೋದ ನಂತರ ಪ್ರತಿ ಪತ್ರದಲ್ಲಿಯ ಪಾಠದ ವಿಷಯವಾಗಿ ಹಾಗೂ ಉಪಾಧ್ಯಾಯ-ಶಿಷ್ಯೆಯ ಸಂಬಂಧವಾಗಿಯೇ ಬರೆಯುತ್ತಿದ್ದರು. ಕೊನೆಗೆ ಬಹಳ ಅಸಮಾಧಾನ ಪಟ್ಟುಕೊಂಡು ಒಂದು ಆಕ್ಷೇಪಣೆಯ ಪತ್ರವನ್ನು ಬರೆದ ಮೇಲೆ ಉತ್ತರ ಬಂದು. ವಿಧೇಯಳಾದ ಶಿಷ್ಯೆಯಿಂದಲ್ಲ. ಪ್ರಿಯ ಲಲಿತೆಯಿಂದ ಆಕೆ ತಂದೆಯ ಮನೆಯಿಂದ ಬಂದ ಮೇಲೆ ಪಾಠದ ಮಾತೇ

--- ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 37 & 47

ಆಡಲಿಲ್ಲ. ಪಾಠ ತಪ್ಪಿದ್ದರಿಂದ ಇವರಿಬ್ಬರು ನಡುವೆ ಮುಸುಕಿದ್ದ ಮಂಜು ಹರಿದು ಮತ್ತೆ ಒಬ್ಬರ ಮುಖವನ್ನೊಬ್ಬರು ನೋಡುವ ಹಾಗಾಯಿತು ನಂತರ ಲಲಿತೆಯ ವಿಧ್ಯಾಭ್ಯಾಸಕ್ಕೆ ಕೆಲವು ದಿನಗಳಾದ ಮೇಲೆ ಉಪಾಧ್ಯಾರೊಬ್ಬರನ್ನು ಗೊತ್ತು ಮಾಡುತ್ತಾರೆ. ಲಲಿತೆಯಿಂದ ಯಾವುದೇ ಆಕ್ಷೇಪಣೆ ಇರುವುದಿಲ್ಲ. ಪರಿಣಾಮವಾಗಿ ಈಗ ಲಲಿತಿಯು ನಾನು ಒಟ್ಟಗೆ " ರೋಮಿಯೋ ಜ್ಯೂಲಿಯೆಟ್" ನಾಟಕವನ್ನು ಷೆಲ್ಲಿಯ ಗೀತೆಗಳನ್ನು ಓದುತ್ತೇವೆ. ಆದರೆ ಅದು ನನ್ನ ಶಿಕ್ಷಣದ ಮಹಿಮೆಯಲ್ಲ ಎಂದು ಹೇಳುತ್ತಾರೆ. ಇದು ಲೇಖಕರ ದೊಡ್ಡಗುಣ.

ಈ ಪ್ರಬಂಧದಿಂದ ಶಿಕ್ಷಣ ಪಡೆಯುವುದು ಪ್ರತಿಯೊಬ್ಬರ ಹಕ್ಕು. ಹೆಣ್ಣುಮಗಳು ಕೂಡ ಗಂಡು ಮಕ್ಕಳಂತೆ ಶಿಕ್ಷಣ ಪಡೆಯಳು ಅರ್ಹಳು ಮನೆಯ ಮೊದಲ ಗುರು ತಾಯಿ ಆಕೆ ಮೊದಲು ಸುಶಿಕ್ಷಿತಳಾಗಬೇಕು ಎಂಬುದು ತಿಳಿಯುತ್ತದೆ.

ಪ್ರಣಯ ಯಾತ್ರೆ :

ಈ ಪ್ರಬಂಧದ ವಸ್ತು ಪ್ರಣಯ ಯಾತ್ರೆಯೇ ಆಗಿದೆ. ಲೇಖಕರು ಈ ಲೇಖನದಲ್ಲಿ ಮದುವೆಯಾಗಿ ಎಂಟು ವರ್ಷವಾಯಿತು ಎಂದು ಬಳಸುತ್ತಾರೆ. ಬಹುಃಶ ತಮ್ಮ ಮದುವೆಯಾಗಿ ಎಂಟು ವರ್ಷಗಳಾದ ಮೇಲೆ ಈ ಪ್ರಬಂಧವನ್ನು ಬರೆದಿರಬೇಕು. ಅನಿಸುತ್ತದೆ. ಲೇಖಕರಿಗೆ ಮದುವೆಯಾಗಿ ಎಂಟು ವರ್ಷಗಳಾಗಿರುತ್ತದೆ. ಒಂದು ವಿಧದಲ್ಲಿ ಹೇಳುವುದಾದರೆ ಆ ಎಂಟು ವರ್ಷಗಳು ಸುಖಮಯವಾಗಿಯೇ ಕಳೆದಿರುತ್ತದೆ. ಅಲ್ಲದೇ ಲೆಖಕರ ಕುಟುಂಬ ಶ್ರೀಮಂತಿಕೆಯ ಕುಟುಂಬವಲ್ಲದಿದ್ದರೂ ಕೂಡ ಬಡತನವೇನಿರಲಿಲ್ಲ. ಲೇಖಕರನ್ನು ಕಂಡರೆ ತಾಯಿಗೆ ತುಂಬಾ ಪ್ರೀತಿ, ಮಗನ ಸೌಖ್ಯವೆ ತಮ್ಮ ಸೌಖ್ಯವೆಂದು ತಿಳಿದಂತವರು. ಲೇಖಕರಿಗೆ ಮನೆಯಲ್ಲಿ ಎಲ್ಲ ಇತ್ತು ಆದರೆ ಸ್ವಾತಂತ್ರ್ಯ ಇರಲಿಲ್ಲ. ಅಂದರೆ ಮದುವೆಯಾದ ಹೊಸದರಲ್ಲಿ ಪ್ರತಿಯಾಬ್ಬ ಗಂಡೂ ಕೂಡ ತನ್ನ ಹೆಂಡತಿ ಜೊತೆ ಸಲಿಗೆಯಿಂದ ಮಾತನಾಡುವುದು. ಹೊರಗಡೆ ಸುತ್ತಾಡಬೇಕು. ಎಂಬ ಆಸೆಗಳು ಸಹಜವಾಗಿ ಇರುತ್ತವೆ. ಆದ್ದರಿಂದ ಮದುವೆಯಾದ ಹೊಸದರಲ್ಲಿ ಪಶ್ಚಿಮ ದೇಶದವರು 'ಹನಿಮೂನ್' ಹೋಗುವಂತೆ ತಾವೂ ಕೂಡ ಪ್ರಣಯ ಯಾತ್ರೆ ಹೋಗಬೇಕೆಂದುಕೊಳ್ಳುತ್ತಾರೆ. ತಾವು ಮತ್ತು ತಮ್ಮ ಹೆಂಡತಿ ಲಲಿತೆ ಇಬ್ಬರೇ ಎಲ್ಲಾದರೂ ಹೋಗಿ ಇದ್ದು ಬರಬೇಕು ಹಾಗು ಯಾವ ಮಾತಾಡಿದರೇ ಯಾರೇನೂ ತಿಳಿದುಕೊಳ್ಳುತ್ತಾರೋ ಎಂಬ ಭಯ ಅಥವಾ ನಾಚಿಕೆ ಇರಬಾರದು ಅಂತಹ ಸ್ಥಳಕ್ಕೆ ಹೋಗಿ ಬರಬೇಕೆಂದು ನಿರ್ಧರಿಸುತ್ತಾರೆ.

ಎಲ್ಲಿಗೆ ಹೋಗುವುದು ಎನ್ನುವುದೆ ಮುಂದಿನ ಸಮಸ್ಯೆ. ಚಾಮುಂಡಿ ಬೆಟ್ಟದ ಬಂಗಲೆಗೆ ಹೋಗೋಣ ಎಂದರೆ ಏನಾದರೂ ಸಾಮಾನು ಬೇಕಾದರೆ ಬೆಟ್ಟವನ್ನಿಳಿದು ಬರಬೇಕು.

ತಿರುಮಕೂಡಲು ನರಸೀಪುರಕ್ಕೆ ಹೋಗಬಹುದು ಅಲ್ಲಿಯ ಬಂಗಲೆ ನದಿ ತೀರದಲ್ಲಿ ಎತ್ತರವಾದ ಸ್ಥಳದಲ್ಲಿದೆ. ಆದರೆ ಆ ಬಂಗಲೆ ರಸ್ತೆಗೆ ಬಹಳ ಹತ್ತಿರ ಧೂಲಿನಲ್ಲಿ ಸ್ನಾನ ಮಾ ಬಸ್ಸಿನ ಸಂಗೀತವನ್ನು ಕೇಳುವುದಕ್ಕೆ ಅಷ್ಟು ದೂರ ಹೋಗಬೇಕೆ? ಎಂದು ಹೋಗುವುದಿಲ್ಲ ನಂತರ ಶಿವಗೆರಿಗೆ ಹೋಗಬೇಕೆಂದು ಹೋಗಲು ನಿರ್ಧರಿಸುತ್ತಾರೆ. ಆದರೆ ಆ ದಿನವೇ ತಮ್ಮ ಒಂದು ಪ್ರತೀಬಂಧಕವನ್ನು ತಂದಿಡುತ್ತಾನೆ. ಅದೇನೆಂದರೇ ಶಿವಗೆರೆಯಲ್ಲಿ ಲೇಖಕರು ತೆಗೆದುಕೊಳ್ಳಬೇಕೆಂದಿದ್ದ ಮನೆಯಲ್ಲಿ ದೆವ್ವವಿತ್ತಂತೆ ಎಂದು ಹೇಳುತ್ತಾನೆ. ಲೇಖಕರಿಗೆ ದೆವ್ವ ದೇವರುಗಳ ಮೇಲೆ ನಂಬಿಕೆ ಇಲ್ಲವಾದ್ದರಿಂದ ಹೋಗುತ್ತೇನೆಂದಾಗ ಅವರ ತಾಯಿ "ಇದೇನೋ ನಿನ್ನ ಹುಚ್ಚು. ಆ ಮನೆಯಲ್ಲಿ ಹಗಲು ಹೊತ್ತೆ ದೆವ್ವ ಕುಣಿಯುತ್ತಂತೆ ಅಲ್ಲಿಗೆ ಅವಳನ್ನೂ ಕರೆದುಕೊಂಡು ಹೋಗಿ ಬಲಿ ಕೊಡುತ್ತಿಯ! ಸಾಕುಬಿಡು ಅತಿರೇಕ" [5] ಎಂದು ರೇಗುತ್ತಾರೆ. ಅಲ್ಲಿಗೆ ಶಿವಗೆರೆಗೆ ಹೋಗುವ ಏರ್ಪಾಡುಉ ಬಿದ್ದು ಹೋಗುತ್ತದೆ.

ಇನ್ನೂ ಉಳಿದದ್ದು ಹೊನ್ನೂರು ಅನಾರೋಗ್ಯದ ಸ್ಥಳವಾದರೂ ತಮ್ಮ ತಾಯಿ ಹಟ ಹಿಡಿದ ಪರಿಣಾಮವಾಗಿ ಬಂದು ಮನೆಯನ್ನು ಗೊತ್ತುಮಾಡಿ ಅಲ್ಲಿಗೆ ಹೋಗಲು ನಿರ್ಧರಿಸುತ್ತಾರೆ. ಲೇಖಕರಿಗೆ ರಜ ಮುಗಿದ ಮಂಜೂರಾದ ಮೇಲೆ ಹೊದರುವ ಏರ್ಪಾಡು ಮಾಡುತ್ತಾರೆ.

ಅಲ್ಲಿಗೆ ಏನೇನು ಸಾಮಾನು ತೆಗೆದುಕೊಂಡು ಹೋಗಬೇಕೋ ಅವೆಲ್ಲವನ್ನು ತಾಯಿ ಕಟ್ಟಿಕೊಡುತ್ತಾರೆ. ಸರಿಯಾಗಿ ಮಧ್ಯಾಹ್ನ ಒಂದು ಗಂಟೆಗೆ ಹೊನ್ನೂರಿಗೆ ಹೋಗುತ್ತಾರೆ. ಉಳಿದುಕೊಳ್ಳುವ ಕೊಠಡಿ ಅಷ್ಟೇನೂ ಯೋಗ್ಯವಿಲ್ಲದಿದ್ದೂ ಅದನ್ನು ಸರಿ ಮಾಡಿಸಿಕೊಡುವುದಾಗಿ ಮಾಲೀಕ ಗುಂಡಪ್ಪನವರು ಭರವಸೆ ಕೊಡುತ್ತಾರೆ ಹೊಸದಾಗಿ ಸ್ವಾತಂತ್ರ್ಯದ ಪ್ರಪಂಚಕ್ಕೆ ಬಂದು ಸೇರಿದ್ದ ಅವರಿಗೆ ಈ ಅನಾನುಕೂಲಗಳು ಯಾವು ಕೂಡ ಕಂಡುಬರಲಿಲ್ಲ.

ಲೇಖಕರು ತಮ್ಮ ಹೆಂಡತಿ ಲಲಿತೆಯ ಜೊತೆ ಸಂತೋಷವಾಗಿ ಕಾಲ ಕಳೆಯಲು ಹೊನ್ನೂರಿಗೆ ಬರುತ್ತಾರೆ. ಆದರೆ ಅಲ್ಲಿ ಅನುಕೂಲಗಳಿಗಿಂತ ಅನಾನುಕೂಲಗಳೇ ಹೆಚ್ಚಾಗಿ ಇರುತ್ತವೆ. ರಾತ್ರಿ ಮಲಗಿದ್ದಂತಹ ಸಂದರ್ಭದಲ್ಲಿ ರಾತ್ರಿ ಹನ್ನೆರಡು ಘಂಟೆಗೆ ಸರಿಯಾಗಿ ಮಳೆಬಂದ ಕಾರಣ ಮನೆಯಲ್ಲಾ ಸೋರಿ ನಿದ್ದೆ ಯನ್ನು ಭಂಗಪಡಿಸುತ್ತದೆ. ಇದರಿಂದ ಕೋಪಗೊಂಡು ಜುಂಡಪ್ಪನವರನ್ನು ಕೂಗಿದಾಗ "ನೀವು ಬಂದ ಘಳಿಗೆ ಒಳ್ಳೆ ಯದು ಸ್ವಾಮಿ ಊರಿನಲ್ಲಿ ಎರಡು ತಿಂಗಳಿಂದ ಮಳೆಯ ಹನಿ ಇಲ್ಲದೇ ಪೈರು ಪಚ್ಚೆಯೆಲ್ಲಾ ಗೆಜ್ಜಲು ಹಿಡಿದು ಹೋಗುತ್ತಿತ್ತು ನೀವು

--- ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 52

ಬರುತ್ತಾ ಜೊತೆಯಲ್ಲಿ ಮಳೆಯನ್ನು ತಂದಿರಿ" ಎಂದು ಶಾಬಾಸುಗಿರಿಯನ್ನು ಕೊಡುತ್ತಾರೆ. ಈ ಮಾತಿಗೆ ಉತ್ತರ ಕೊಡಲು ಲೇಖಕರಿಗೆ ಸಾಧ್ಯವಾಗುವುದಿಲ್ಲ.ಮುಂದೆ ಪುರೋಹಿತರು ಹಾಗು ಲೇಖಕರ

ಪೂರ್ವ ಸ್ನೇಹಿತ ಕಂಠಿ ಎಂಬುವವರು ವಾಕಿಂಗ್ ಹೊರಟಾಗ ಸಿಕ್ಕ ಅವರ ಆಸೆಗೆ ಭಂಗ ತರುತ್ತಾರೆ. ಹೀಗೆ ಅವರ ಸಂತೋಷವಾವ ಅಮೂಲ್ಯವಾದ ಕ್ಷಣಗಳನ್ನು ಯಾರ್ಯರು ಹಾಳು ಮಾಡುತ್ತಿದ್ದರು. ಮೈಸುರನ್ನು ಬಿಟ್ಟು ಕಾಲ ಕಳೆಯುವುದಕ್ಕೆ ಹೊನ್ನೂರಿಗೆ ಬಂದರೂ ಅಲ್ಲಿಯೂ ಇಂತಹ ವಿಘ್ನಗಳು ನಡೆಯುತ್ತಿದ್ದವು.

ಕೊನೆಗೆ ರಂಗನ ಬೆಟ್ಟಕ್ಕೆ ಹೋಗುವ ಆಸೆ ಲಲಿತೆಗೆ ಇತ್ತು ಅಷ್ಟರಲ್ಲಿ ಆಕೆಗೆ ಕೆಮ್ಮು ನೆಗಡಿಯಿಂದ ಆರೋಗ್ಯ ಕೆಟ್ಟದ್ದರಿಂದ ಮೈಸೂರಿನಿಂದ ಹೊನ್ನೂರಿಗೆ ಲೇಖಕರ ತಾಯಿ ನೊಡಲು ಬರುತ್ತಾರೆ. ಇವರ ಸ್ಥಿತಿಯನ್ನು ನೋಡಿ ಕೂಡಲೇ ಮೈಸೂರಿಗೆ ಹೊರಡಲೇ ಬೇಕೆಂದು ಹಟ ಹಿಡಿಯುತ್ತಾರೆ. ಕೊನೆಗೆ ಮೈಸೂರಿಗೆ ಹೋಗುವುದು ನಿಶ್ಚಯವಾಗಿ ಲೇಖಕರು ಬಹಳ ದಿನದಿಂದ ಆಸೆಪಟ್ಟು ಪಡೆದಿದ್ದ ಪ್ರಣಯ ಮಾಸವು ಕೇವಲ ಇಪ್ಪತ್ತು ದಿನಗಳಲ್ಲಿಯೇ ಮುಕ್ತಾಯವಾಗುತ್ತದೆ.

ಲೇಖಕರು ಈ ಪ್ರಬಂಧಲ್ಲಿ ತಮ್ಮ ಪ್ರಣಯಯಾತ್ರೆ ನಡೆದದ್ದನ್ನು ಹಾಗು ಯಾವ ರೀತಿ ಭಂಗವಾಯಿತೆಂಬುದನ್ನು ತಿಳಿಸಿದ್ದಾರೆ. ಇದರಿಂದ ಅವರ ಅನುಭವಗಳನ್ನು ಈ ಪ್ರಬಂಧದಲ್ಲಿ ಹಂಚಿಕೊಂಡಿರುವುದನ್ನು ಕಾಣಬಹುದಾಗಿದೆ.

ಅಲೆಯುವ ಮನ" ಲಲಿತ ಪ್ರಬಂಧಗಳಲ್ಲಿ ವಸ್ತುವೈವಿಧ್ಯ

1. ಕೆನ್ನಿಂಗ್ಟನ್ ಪಾರ್ಕ
2. ಹೋಟಲುಗಳು
3. ಹೆಂಡತಿಯ ಹೆಸರು
4. ದಿವಾನಖಾನೆಯ ಅಂದ ಚೆಂದ
5. ಹರಕೆಗಳು
6. ಕ್ಲೀಷಾ ಪ್ರವೀಣರ ಸಾಕ್ಷ್ಯ
7. ವ್ಯಾಘ್ರಗೀತೆ.
8. ಕಾರ್ ರಿಪೇರಿ– ನೀವೇ ಮಾಡಿ ನೋಡು
9. ಮಹಾರಾಜಾ ಕಾಲೇಜಿನ ಕಾಮನ್ ರೂಮು
10. ಟೆಲಿಫೋನ್
11. ಸಾಹಿತಿಯ ಚಹರೆ
12. ಸಣ್ಣ ಕಥೆಗಳ ಹಾವಳಿ
13. ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು
14. ಅಕ್ಕಿಹೆಬ್ಬಾಳು

"ಅಲೆಯುವ ಮನ" ಎಂಬ ಲಲಿತ ಪ್ರಬಂಧವನ್ನು ಮೊದಲಿಗೆ 1957 ರಲ್ಲಿ ಪ್ರಕಟವಾಯಿತು. ನಂತರ 1959 ರಲ್ಲಿ ಎರಡನೆಯ ಬಾರಿಗೆ ಮುದ್ರಿತವಾಯಿತು.ಕೊನೆಯ ಬಾರಿಗೆ ಆರನೆಯ ಮುದ್ರಣವನ್ನು 1994 ರಲ್ಲಿ ಕಾಣಬಹುದಾಗಿದೆ ಲೇಖಕರ ಈ ಪ್ರಬಂಧವು ಕನ್ನಡ ಸಾಹಿತ್ಯದಲ್ಲಿ ತನ್ನ ಮೆರುಗನ್ನು ನೀಡಿತು ಇದರಲ್ಲಿ ಬರುವ ಹದಿನಾಲ್ಕು ಪ್ರಬಂಧಗಳು ತನ್ನದೇ ವಿಚಾರವನ್ನು ಒಳಗೊಂಡಿದ್ದು ಉತ್ಮ ರೀತಿಯ ಪ್ರಬಂಧವಾಗಿ ಹೊರಹೊಮ್ಮಿದೆ. ಅಲೆಯುವ ಮನದ ಆರಂಭದ ಪ್ರಬಂಧವು ಲೇಖಕರಿಗೆ ಬಲವಂತದ ಬರಹವಾಗಿ ಕಂಡಿತ್ತು ಆದರೂ ಬರೆದು ಅದನ್ನು ಸ್ನೇಹಿತರಿಗೆ ಕೊಟ್ಟರು ಎನ್ನಲಾಗಿದೆ. ಹೋಟಲ್ ನಲ್ಲಿ ಮಾಣಿಯ ವೈಶಿಷ್ಟ್ಯತೆ ಅತ್ಯಂತ ರೀತಿಯಲ್ಲಿ ಕಾಣಬಹುದಾಗಿದೆ. ಹರಕೆಯಲ್ಲಿಯು ಸಹ ಅವರ ಅರ್ಧಾಂಗಿ ಮಾಡಿದ ಹರಕೆಯನ್ನು ಲೇಖಕರ ಅದನ್ನು ನಂಬದೇ ತನ್ನ ವೈಶಿಷ್ಟ್ಯತೆಯನ್ನು ಮರೆದರೆ ಎಂದು ತಿಳಿಯಬಹುದಾಗಿದೆ. ಸಾಹಿತಿಯ ಚಹರೆಯನ್ನು ಲೇಖಕರು ಬರೆಯುವಾಗ ಅವರಿಗೆ ಆದ ಅನುಭವ ವಿಶೇಷತೆಯನ್ನು ತಂದಿತು ಎಂದು ತಿಳಿಯಬಹುದಾಗಿದೆ. ಲೇಖಕರು ಮನೆಯನ್ನು ಕಟ್ಟಿ ಸಾಲವು ಹೊರೆಯಾದಾಗ ಅದರಿಂದ ತಮಗೆ ಆದ ಅನುಭವಗಳನ್ನು ಸಾಹಿತ್ಯದ ಮೂಲಕ

ಮೂಲಕ ಹಂಚಿಕೊಂಡು ಸಾಲ ಮಾಡಿ ಮನೆ ಕಟ್ಟವುದರಿಂದ ಆಗುವ ಅನಾನುಕೂಲಗಳನ್ನು ತಪ್ಪಿಸಿಕೊಳ್ಳಲು ಇರುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು ಇದ್ದರೆ ಸಾಕು ಎಂದು ಲೇಖಕರ ಅಭಿಪ್ರಾಯವು ಮೂಡಿರುವುದಾಗಿ ತಿಳಿಯಬಹುದು.

ಹೀಗೆ ಅಲೆಯುವ ಮನ ಪ್ರಬಂಧವು ಲೇಖಕರ ಅಭಿರುಚಿಗೆ ತಕ್ಕಂತೆ ಹಂತ ಹಂತವಾಗಿ ಭಾವನೆಗಳು ಲೇಖನಿಯ ಮೂಲಕ ಹೊರಹೊಮ್ಮಿರುವುದಾಗಿ ಕಾಣಬಹುದಾಗಿದೆ.

**" ಅಲೆಯುವ ಮನ " ಲಲಿತ ಪ್ರಬಂಧಗಳಲ್ಲಿ ವಸ್ತುವೈವಿಧ್ಯ**

**<u>ಕೆನ್ಸಿಂಗ್ಟನ್ ಪಾರ್ಕ:</u>**

ಈ ಪ್ರಬಂಧದ ವಸ್ತು ಕೆನ್ಸಿಂಗ್ಟನ್ ಪಾರ್ಕ ಲೇಖಕರು ಈ ಕೆನ್ಸಿಂಗ್ಟನ್ ಪಾರ್ಕ ಪ್ರಬಂಧವನ್ನು ಬರೆಯುವುದಕ್ಕೆ ಒಂದು ಕಾರಣವಿದೆ. ಅದನ್ನು ಇಲ್ಲಿ ವಿವರಿಸಿದ್ದಾರೆ. ಲೇಖಕರು ಮಾಸವಿದ್ದುದ್ದು ಮೈಸೂರಿನಲ್ಲಿ ಮೈಸೂರಿನಲ್ಲೀ ವರ್ಷಗಟ್ಟಲೇ ನಿರ್ಜನವಾದ ಬೀದಿಗಳಲ್ಲಿ ತಿರುಗಿ ಕೊಟ್ಟರ ಹಳ್ಳಿಯ ಕೆರೆಯ ಏರಿಯ ಮೇಲೆ ಒಂಟಿಯಾಗಿ ಕುಳಿತು ಸಾಕಾಗಿದೆ. ಪ್ರತಿದಿನವೂ ಅದೇ ಸಾಲುಮರಗಳು ಅದೇ ಸಂಧ್ಯಾರಾಗ ಅದೇ ಕೆರೆಯಲ್ಲಿ ದೀಪಗಳಲ್ಲಿ ಪ್ರತಿಬಿಂಬ, ನಿಶ್ಯಬ್ಧತೆ ಇವುಗಳನ್ನು ನೋಡಿ ನೋಡಿ ಲೇಖಕರಿಗೆ ಜಿಗುಪ್ಸೆ ಹುಟ್ಟಿ ಲೇಖಕರಿಗೆ ಈಗ ರುಚಿಸುವುದೆಂದರೆ.

ಜನನಿಬಿಡವಾದ ಬೀದಿಗಳು ಬೈಸಿದಲ್ ಮೋಟಾರುಗಳ ಸಂದಣಿ ಜಟಕಾದವರ ಚಾವಟಿಯ ಶಬ್ದದ ವೈಖರಿ ವಿದ್ಯುದ್ದೀಪರಂಜಿತವಾದ ಅಂಗಡಿಗಳಲ್ಲಿ ಕರಗೊಳಿಸುವ ವಸ್ತ್ರಭೂಷಣಗಳು ಬೆಳಗೆ ವೈವಿಧ್ಯವನ್ನು ಕೊಡುವ ನಿಯಾನ ಸೈನುಗಳು ಅಲ್ಲಲ್ಲಿಯೇ ಕೇಳಿಬರುವ ರೇಡಿಯೋ ಸಂಗೀತ ಹೊಟಲುಗಳಿಂದ ಬರುವ ಭಕ್ಷ್ಯಗಳ ಕಂಪು ಇವುಗಳನ್ನು ಒಂದು ದಿನದ ಮಟ್ಟಿಗಾದರೂ ತಮ್ಮ ಜೀವನದ ಬಿಗುಮಾನವನ್ನು ಮರೆತು ಕೈಯಲ್ಲಿ ಒಂದು ಪೊಟ್ಟಣ ಗರಿಯಾದ ತಿಂಡಿಯನ್ನು ಹಿಡಿದು ಕುರುಕುತ್ತಾದೊಡ್ಡ ಪೇಟೆಯಲ್ಲಿ ನಿರಾತಂಕವಾಗಿ ಅಲೆಯಬೇಕೆಂಬುದು ಲೇಖಕರ ಆಸೆ ಅದಕ್ಕಾಗಿ ತಮ್ಮ ಬೆಂಗಳೂರಿನ ಮಿತ್ರರ ಮನೆಗೆ ಬರುತ್ತಾರೆ. ಇವರು ಲೇಖಕರ ಮನೋವೃತ್ತಿಗೆ ಹೊದಿಕೊಳ್ಳುವವರೇ ಆದರೂ ಈ ಬಾರಿಯೇನೋ ಒಬ್ಬೊಬ್ಬರಿಗೆ ಒಂದೇಂದು ತರಹುಚ್ಚು ಹಿಡಿದಂತೆ ತೋರಿತು ಎಂದು ಹೇಳುತ್ತಾರೆ.

ಲೇಖಕರಿಗೆ ತಾತ್ಕಾಲಿಕವಾಗೆ ಅನ್ನಾತರಾಗಿದ್ದ ಭಟ್ಟರ ಉಪನ್ಯಾಸವನ್ನು ಮರೆಸಿ ತಪ್ಪಿಸಿಕೊಂಡು ಹೋಗಬೇಕೆನ್ನುವಷ್ಟರಲ್ಲೀ ಇವರ ಪ್ರಿಯ ಮಿತ್ರ ರಾಯರು ಬರುತ್ತಾರಿ. ರಾಯರು ಉತ್ತಮ ಏಗಾದ ಸಾಹಿತಿಗಳು. ಕಥೆಗಾರರು. ರಾಯರು ಈ ಹಿಂದೆ ಕೆನ್ಸಿಂಗ್ಟನ್ ಪಾರ್ಕಿನ ಬಗ್ಗೆ ಉತ್ತಮವಾದ ಪ್ರರಂಭವನ್ನು ಬರೆದಿದ್ದರು. ಪ್ರರಂಭದ ಕಲೆಗೆ ತಾವಲ್ಲದೇ ಆ ಪಾರ್ಕು ಕಾರಣವೆಂಬು ಅವರಿಗೆ ಭ್ರಮೆ ಹುಟ್ಟಿತ್ತು. ಆ ದಿನ ತಮ್ಮನ್ನು ಊಟಳ್ಳೆಂದು ಬರಹೇಳಿ ಪಾರ್ಕಿಗೆ ಕರೆದೊಯ್ದರು. ಪಾರ್ಕನಲ್ಲಿ ಎತ್ತ ನೋಡಿದರೂ ಜನರ ಸುಳಿವಿಲ್ಲ: ನೆಲದ ಮೇಲೆ ಹಸುರಿನ ಚಿಹ್ನೆಯಲ್ಲ : ಹೂವಿನ ಗಿಡಗಳು ಕೂಡ ಬಣಗಿ ನಿಂತಿದ್ದವು. ಆದರೂ ರಾಯರ ಉತ್ಸಾಹ ಕುಂದದೇ "ಈಗೇನೋ ನೆಲವೆಲ್ಲಾ ಬಣಗಿದೆ. ಆದರೆ ವಸಂತ ಕಾಲದಲ್ಲಿ ಅದರ ಸೊಬಗನ್ನು ನೋಡಬೇಕಾಗಿತ್ತು " ಎನ್ನುವರು ಪಾರ್ಕಿನ ಹತ್ತಿರವಿದ್ದ ಕರೆಗೆ ಕರೆದುಕೊಂಡು ಹೋಗುತ್ತಾರೆ. ಅದರಲ್ಲಿ ಒಲೆಯ ಗುಪ್ಪೆಗಳಂತೆ ಮೂರು ದಿಣ್ಣೆಗಳಿರುತ್ತದೆ. ದೋಣಿಯಲ್ಲಿ ಕುಳಿತು ಆ ದ್ವೀಪಗಳಿಗೆ ಹೋಗಬೇಕೆಂದು ಮಿತ್ರರೆಲ್ಲಾ ನಿಶ್ಚಯಿಸುತ್ತಾರೆ. ಆದರೆ ದೋಣಿ ನಡೆಸುವ ನಾವಿಕನು ಇರುವುದಿಲ್ಲ. ತಾವು ಸರಳಜೀವಿಗಳೆಂದು ಯಾವ ಕೆಲಸಕ್ಕಾದರೂ ಸಿದ್ಧರೆಂದೂ ಹೆಮ್ಮೆಪಡುತ್ತಾ ರಾಯರೂ. ಆಚಾರ್ಯರೂ ತಾವೇ ಹುಟ್ಟು ತೆಗೆದುಕೊಂಡು ಹೊರಡುತ್ತಾರೆ. ಲೇಖಕರಿಗೆ ಮೇಲೆ ಬಿಸಿಲಿನ ತಾಪ : ಒಳಗೆ ಹಸಿವಿನ ತಾಪ : ಜೊತೆಗೆ ಆ ಕಾಲದ ದುರ್ಮರಣದ ಭೀತಿ. ಆದರೂ ಬೇರೆ ಥಥವಿಲ್ಲದೆ ಹೆಂಡತಿ ಮಕ್ಕಳನ್ನು ಒಂದು ಬಾರಿ ನೆನೆದು. ನಾಬದ ದೈವಗಳಿಗೆಲ್ಲಾ ಮನಸ್ಸಿನಲ್ಲಿಯೇ ಕೈಮುಗಿದು ಹಣೆಯ ಬರಹವಿದ್ದಂತಾಗಲೆಂದು ದೋಣಿಯಲ್ಲಿ ಕುಳಿತುಕೊಳ್ಳುತ್ತಾರೆ. ನಾವಿಕರು ದೋಣಿಯನ್ನು ನಡೆಸಿದರೋ ಅಥವಾ ದೋಣಿಯೇ ನಾವಿಕರನ್ನು ಎಳೆದೊಯ್ದಿತೋ ಅಂತೂ ದ್ವೀಪಕ್ಕೆ ಬಂದು ಸೇರುತ್ತಾರೆ.

' ದ್ವೀಪ ' ವನ್ನು ಸುತ್ತಿ ಆದ ಮೇಲೆ ಮಧ್ಯಾಹ್ನ ಒಂದು ಘಂಟೆಗೆ ಮನೆಗೆ ಬರುತ್ತಾರೆ ನಂತರ ರಾಯರು ಅದುವರೆಗೂ ಅಡಗಿಸಿಟ್ಟಿದ್ದ ತಮ್ಮ ದುರುದ್ದೇಶವನ್ನು ಹೊರಗೆಡವುತ್ತಾರೆ. ಅದೇನೆಂದರೆ ಕೆನ್ಸಿಂಗ್ಟನ ಪಾರ್ಕಿನ ವಿಷಯವಾಗಿ ನಾವೆಲ್ಲರೂ ಒಂದೊಂದು ಲೇಖನವನ್ನು ಬರೆಯಬೇಕೆಂದೂ ಅದೆಲ್ಲವನ್ನು ಒಟ್ಟುಗೂಡಿಸಿ ಪುಸ್ತಕ ರೂಪದಲ್ಲಿ ಪ್ರರಬಿಸಬೇಕೆಂದು ರಾಯರು ಸೂಚಿಸುತ್ತಾರೆ. ಪಾರ್ಕಿನ ಭಾತ ಮತ್ತೆ ಬೃಹದಾಕಾರದಲ್ಲಿ ನಿಂತಂತೆ ಕಂಡಿತು. " ರಾಯರು ಇಷ್ಟು ಒಳ್ಳೆಯ ಊಟ ಹಾಕಿಸಿರುವಾಗ ಅವರ ಮಾತಿನಂತೆ ನಡೆಯುವುದು ನಮ್ಮ ಕರ್ತವವ್ಯ " ಎಂದು ಲೇಖಕರಿಗೆ ಅನಿಸಿದ್ದರೂ ಆ ಪಾರ್ಕಿನ ಮೇಲೆ ಪ್ರೇಮವಿಲ್ಲ. " ಖಂಡಿತವಾಗಿಯು ನಾನು ಒಂದಕ್ಷರವನ್ನು ಬರೆಯುವುದಿಲ್ಲ. ಇಂಥ ಪುಸ್ತಕಗಳನ್ನು ಪ್ರರಬಿಸುವುದರಲ್ಲಿ ನನಗೆ ನಂಬಿಕೆಯಿಲ್ಲ. ವಾಚಕವೃಂದ ನನಗೇನೂ ಅಪರಾಧ ಮಾಡಿಲ್ಲ " ಎಂದು ನಿಷ್ಠುರೋಕ್ತಿಗಳನ್ನಾಡಿ ಅಲ್ಲಿರಿದ ಓಡಿ ಹೋಗಿ ಮೈಸೂರಿಗೆ ಬಂದ ಮೇಲೆ ರಾಯರಿಂದ ಪತ್ರ ಬರುತ್ತದೆ.ಅದು " ನೀವು ವಚನ ಕೊಟ್ಟಿರುವಂತೆ ಲೇಖನವನ್ನು ಬೇಗ ಕಳುಹಿಸುತ್ತೀರೆಂದು ನಂಬಿದ್ದೇನೆ." ಎಂದು! ರಾಯರ ಹಿಂಸೆಯನ್ನು ತಡೆಯಲಾರದೇ ಕೆನ್ಸಿಂಗ್ಟನ್ ಪಾರ್ಕ ಪ್ರಬಾಧವನ್ನು ಬರೆದು ಮುಗಿಸಿ ಮಿತ್ರರಿಗೆ ಕೊಡುತ್ತಾರೆ.

ಒಟ್ಟಾರೆಯಾಗಿ ಯಾವುದೇ ಒಬ್ಬ ಕವಿ ವನನೇ ಬರೆಯಬೇಕಾದರು ಅದು ಆತನ ಮನಸ್ಸಿಗೆ ಹಿಡಿಸಬೇಕು. ಅಥವಾ ಮನಸ್ಸನ್ನು ಗೆಲ್ಲಬೇಕು. ಆಗ ಮಾತ್ರ ಕವಿ. ಅದನ್ನು ಬರೆಯಲು ಸಾಧ್ಯ ಇಲ್ಲಿದಿದ್ದರೇ ಆ ಬರವಣಿಗೆ ಯಶಸ್ಸನ್ನು ಕಾಣುವುದಿಲ್ಲವೆಂಬುದು ಈ ಪ್ರಬಂಧದಿಂದ ತಿಳಿಯುತ್ತದೆ.

**<u>ಹೋಟಲುಗಳು :</u>**

ಹೋಟಲುಗಳು ಪ್ರರಂಭದ ವಸ್ತು ಹೋಟೆಲು ಮತ್ತು ಮಾಣಿ ಲೇಖಕರು ಪ್ರಬಂಧದ ವಿದ್ಧಕ್ಕೂ ಕೋಟಲು ಮತ್ತು ಮಾಣಿಯ ಗುಣಗಳನ್ನು ವರ್ಣನೆ ಮಾಡಿದ್ದಾರೆ.

ಹೋಟೆಲಿಗೆ ಹೋಗುವುದು ಕೆಟ್ಟದ್ದೆಂದು ಪ್ರಪಂಚವೇ ಹೇಳುತ್ತದೆ ಹೋಟೆಲಿನವರು ಕೇವಲ ಹಣದಾಸೆಗೆ ಕೆಲಸ ಮಾಡುವವರು. ನಮ್ಮ ಆರೋಗ್ಯವೂ ಸೌಖ್ಯವೂ ಅವರಿಗೆ ಬೇಕಾಗಿಲ್ಲ. ಅಲ್ಲದೇ ನಮ್ಮ ಹಿರಿಯರು ಹೋಟೆಲಿಗೆ ಹೋಗುವುದು ಕೆಟ್ಟದ್ದು ಮಾತ್ರವಲ್ಲ ಪಂಚ ಮಹಾಪಾರಕದಳಲ್ಲಿ ಒಂದು ಎಂದೇ ಹೇಳುತ್ತಾರೆ. ಹಿರಿಯರು ಏನೇ ಹೇಳಿದರೂ ಇಂದಿನ ಕಿರಿಯರಿಗೆ ಹೋಟಲುಗಳಲ್ಲಿ ಊಟ ಮಾಡುವುದೆಂದರೇ ಪ್ರೀತಿ. ಇಂದಿನ ದಿನಗಳಲ್ಲಿ ' ಫಲಾಹಾರ ಮಂದಿರ ' 'ಭವನ' ' ಆನಂಧ ಭವನ ', "ಹಳ್ಳಿಮನೆ' 'ಉಡುಪಿಮಂದಿರ' 'ಹಂಸದರ್ಶಿನಿ' ಇಂತಹವುಗಳು ಜನರನ್ನು ಆಕರ್ಷಿಸುತ್ತಿತುವುದರ ಬಗ್ಗೆ ಹೇಳುತ್ತಾರೆ. ಹೋಟಲುಗಳ ಹೆಸರುಗಳನ್ನು ಕೇಳಿಯೇ ನಾವು

ಹೋಗಬೇಕು. ಆ ರೀತಿ ಹೋಟಲುಗಳು ಮಾಡುತ್ತವೆ. ಉದಾರಣೆಗೆ ॥ 'ಕೋಮಲ ವಿಲಾಸ' 'ಆನಂದವಿಲಾಸ ' ಇಂತಹ ಹೆಸರುಗಳಿಂದಲೇ ಜನರು ಆಕರ್ಷಿತರಾಗುತ್ತಾರೆ. ಈಚೆಗೆ ಪ್ರಾಶಸ್ತ್ಯ ಪಡೆದಿರುವ ' ಬಾದೂಷಾ' 'ಸೋನಪಾಪಡಿ'ಮ ಗುಲಾಬ್ ಜಾಮುನ ! 'ಮೈಸೂರು ಪಾಕು' ' ದಾವಣಗೆರೆ ಬೆಣ್ಣೆದೋಸೆ' 'ಹೊಯಗಡಬು', 'ಹೋಳಿಗೆ' 'ಬಾಳೇಕಾಯಿ ಬೋಂಡಾ' ' ಪಕೋಡಾ' 'ಉದ್ದಿನವಡೆ' ಇಂತಹ ತಿಂಡಿಗಳು ಜನರನ್ನು ಮೋಡಿ ಮಾಡಿದುದರ ಬಗ್ಗೆ ಹೇಳುತ್ತಾರೆ. ಲೇಖಕರು ಮಾಣಿಯ ಬಗ್ಗೆ ಹೇಳುತ್ತಾ. ನಮ್ಮ ಆಶ್ರಯ ಹೋಟೆಲುಗಳಿಗೆ ದೊರಕುವುದಕ್ಕೆ ಅಲ್ಲಿಯ ಮಾಣಿಯ ಯೋಗ್ಯತೆಯು ಮುಖ್ಯ ಕಾರಣವಾಗುತ್ತದೆಂದು ಹೇಳುತ್ತಾರೆ. ಮಾಣಿ ಎಂದರೆ ಹೋಟಲಿನಲ್ಲೀ ನಮಗೆ ತಿಂಡಿಕೊಡುವ ಮನುಷ್ಯ ಅವನಿಲ್ಲದಿದ್ದರೇ ಹೋಟಲಿನ ಮುಖ್ಯ ಅಂಗವೇ ಊನವಾದಂತೆ.ಅಲ್ಲದೇ ಮಾಣಿಗೆ ಇರಬೇಕಾದ ಅರ್ಹತೆಗಳ ಬಗ್ಗೆ ಹೇಳುತ್ತಾರೆ.ಮಾಣಿಯ ವಯಸ್ಸು ಇಪ್ಪತ್ತೈದಕ್ಕೆ ಮೀರಿರಬಾರದು, ಸರಳತೆ.ವಿದೇಯತೆ. ಸಹಾನುಭೂತಿ.ಇರಬೇಕೆಂದು ಹೇಳುತ್ತಾರೆ. ನಾವು 'ಏನಿದೆ'?ಎಂದು ಕೇಳುವುದು ತಡ "ಜಾಮುನ್, ಜಿಲೇಬಿ, ಜಹಾಂಗೀರ್,ಬಾಸುಂದಿ, ಬಾದಾಮಿಹಲ್ವಾ, ಬಾದುಷಾ, ಖಾರಾಬೂಂದಿ, ಖಾರಾಸೇವ್" ಎಂದು ಹೆಸರುಗಳನ್ನು ಉಸಿರು ತೆಗೆದುಕೊಳ್ಳದೆಯೇ ಹೇಳುವುದು ಅದ್ಭುತ ಎಂದು ವರ್ಣಿಸುತ್ತಾರೆ. ಮಾಣಿಯ ಗುಣಗಳನ್ನು ಹೇಳುತ್ತಾ."ಜಿಲೇಬಿ ಚೆನ್ನಾಗಿದೆ. ಬೋಂಡ ಈಗತಾನೇ ಮಾಡಿದ್ದು" ಎಂದು ವಿನಯವಾಗಿ ಸಲಹೆ ಕೊಡುತ್ತಾನೆ. ಸ್ಪೆಷಲ್ ಕಾಫಿ ಬೇಕೆಂದರೆ

ಮಾಡಿ ತರುತ್ತೇನೆಂದು ನಮಗೆ ಹಣವನ್ನು ಉಳಿಸುತ್ತಾನೆ. ಮನೆಯಲ್ಲಿ ನಮ್ಮ ಹೆಂಡತಿ ನಮಗೆ ಪ್ರೀತಿಯಿಂದಲೇ ತಿಂಡಿಗಳನ್ನು ಕೊಟ್ಟರು ಕೂಡ, ಅವರು ಆ ತಿಂಡಿ ತಿನ್ನಬೇಡಿ. ಹೆಚ್ಚಾಗಿ ಕಾಫೀ ಕುಡಿಯಬೇಡಿ ಎಂದು ಚಿಕ್ಕ ಉಪನ್ಯಾಸ ಕೊಡುವುದುಂಟು. ಹೀಗೆ ಮನೆಯಲ್ಲಿ ವೈಮನಸ್ತವನ್ನು ತಂದುಕೊಂಡು ಸಂಕಟಪಡುವುದಕ್ಕಿಂತ ಅನಾರೋಗ್ಯಕರವಾದರೂ ಹೋಟೆಲ್ ತಿಂಡಿ ತಿನ್ನುವುದೇ ಉತ್ತಮ . ಅಲ್ಲದೇ ನಾವು ಹೋಟೆಲಿಗೆ ಹೋಗುವುದು ನಮ್ಮ ಪತ್ನಿಯರ ಮೇಲೆ ನಮಗಿರುವ

ಪ್ರೇಮದ ಗುರುತು ಎಂದು ಹೇಳುತ್ತಾರೆ.

<u>ಹೆಂಡತಿಯ ಹೆಸರು</u> :

ಈ ಪ್ರಬಂಧದ ವಸ್ತು ಹೆಂಡತಿಯ ಹೆಸರು. ಹೆಂಡತಿಯ ಹೆಸರು ಹೇಗಿರಬೇಕೆಂಬುದನ್ನು ಪ್ರಬಂಧದಲ್ಲಿ ಲೇಖಕರು ತಿಳಿಸಿಕೊಟ್ಟಿದ್ದಾರೆ. ನಮ್ಮ ಹಿಂದೂ ಸಂಪ್ರದಾಯದಲ್ಲಿ ಒಂದು ಪದ್ಧತಿಯಿದೆ.

ನಮ್ಮಲ್ಲಿ ಮದುವೆಯಾದ ದಿನ ವರನು ವಧುವಿನ ಕೈ ಹಿಡಿದು ದೇವರ ಮನೆಗೆ ಕರೆದುಕೊಂಡು ದೇವರಿಗೂ.ಹಿರಿಯರಿಗೂ. ನಮಸ್ಕಾರ ಮಾಡಿ ಬರುವಾಗ. ಹೆಂಡತಿಯ ಹೆಸರು ಹೇಳುವವರೆಗೂ ಹೊಸ್ತಿಲು

ದಾಟಕೂಡದೆಂದು ಯುವತಿಯರು ಷರತ್ತು ವಿಧಿಸುವುದುಂಟು."ಹೆಂಡತಿಯ ಹೆಸರು ಹೇಳುವ ಧೈರ್ಯವಿದೆಯೇ ಈ ಗಂಡಿಗೆ ಎಂದು ಪರೀಕ್ಷೆ ಮಾಡಿ ನೋಡುವುದು ಮದುವೆಯ ಕಲಾಪದಲ್ಲಿ ಅವಶ್ಯಕವಾದ ಅಂಗವಾಗಿ ಹೋಗಿದೆ. ವಧುವಿನ ಹೆಸರನ್ನು ಕರೆಯುವಾಗ ಈ ಸಂಧರ್ಭದಲ್ಲಿ ಇರಬಹುದಾದಂತ ನಾಚಿಕೆಯನ್ನು ಕುರಿತು ಹೇಳಿದ್ದಾರೆ. ಇನ್ನೂ ಹಿಂದಿನ ಕೆಲವರಿಗೆ ತಮ್ಮ ಸಹಧರ್ಮಿಣಿಯನ್ನು ಹೆಸರಿಟ್ಟು ಕರೆಯುವುದು ಅವಮಾನಕರ, ನಾಚಿಕೆಗೇಡು ಎಂಬ ಭಾವನೆ ಇದೆ.ಲೇಖಕರು ಅದಕ್ಕೆ ಒಂದು ಉದಾಹರಣೆಯನ್ನು ಕೊಡುತ್ತಾರೆ. ನನ್ನ ಬಂಧುಗಳಲ್ಲೊಬ್ಬರು ವಯಸ್ಸಾದವರು .ಐದಾರು ಮಕ್ಕಳ ತಂದೆ.ಮದುವೆಯಾಗಿ ಮೂವತ್ತು ವರ್ಷವಾಗಿದೆ, ಇಷ್ಟಾದರೂ ಅವರು ಆಕೆಯ ಹೆಸರನ್ನು ಹಿಡಿದು ಕೂಗುವುದಿಲ್ಲ . ಅವರನ್ನುದ್ದೇಶಿಸಿ ಮಾತನಾಡುವುದಿಲ್ಲ, ಬದಲಾಗಿ ಎದುರಿಗಿಲ್ಲದ ಮತ್ತೆ ಯಾರನ್ನಾದರೂ ಉದ್ದೇಶಿಸಿ ಮಾತನಾಡುತ್ತಾರೆ. ಕುಡಿಯಲು ನೀರು ಬೇಕಾದಾಗ "ಲೋ ರಾಮು,ಒಂದು ಪಂಚಪಾತ್ರೆ ಗಂಗಾಮೃತ ತಗೊಂಡು ಬಾ ಅನೋ" ಎಂದು ಕೂಗುತ್ತಾರೆ. ಇಂದಿನ ದಿನಗಳಲ್ಲಿ ಈ ಪ್ರಕಾರದ ಗಂಡಹೆಂಡತಿ ನಮಗೆ ಸಿಗುವುದು ಸ್ವಲ್ಪ ಕಷ್ಟವೇ ಎಂದು ಹೇಳಬಹುದು.ಇನ್ನೂ ಕನ್ನಡಿಗರಿಗೆ ಹೆಂಡತಿ ಹೆಸರು ಇದ್ದೂ ಇಲ್ಲವಾಗಿದೆ.ಎಂದು ಹೇಳುತ್ತಾರೆ.ಅನೇಕ ವೇಳೆ ತಂದೆ ತಾಯಿಯವರು ಇಡುವ ಹೆಸರುಗಳು ಉಪಯೋಗಕ್ಕೆ ಅರ್ಹವೂ ಅಲ್ಲ. ಕಮಲ, ಶಾರದ, ಲಕ್ಷ್ಮಿ,ಲಲಿತ ಮೊದಲಾದ ಹೆಸರುಗಳು ಎಷ್ಟು ಮನೋಹರವಾಗಿದ್ದರೂ ಔಚಿತ್ಯವರಿಯದ ಜನರ ಕೈಗೆ ಸಿಕ್ಕಿ ತಮ್ಮ ಸತ್ವವನ್ನು ಕಳೆದುಕೊಂಡಿವೆ. ಬಂಗಾಳಿ ಕಥೆಗಳನ್ನು ಓದುವಾಗ ಕಥೆಯ ಸ್ವಾರಸ್ಯಹೇಗಾದರೂ ಇರಲಿ. ಅಲ್ಲಿಯ ಸ್ತ್ರೀಯರ ಹೆಸರುಹಳೇನೋ ನಮ್ಮನ್ನು ಸೆಳೆಯುತ್ತವೆ. ಲಾವಣ್ಯ, ಹೇಮಾಂಗಿನಿ, ಹೇಮಲತಾ, ಕಿರಣಮಾಲಾ,ರೂಪರೇಖಾ, ಎಂಬ ಹೆಸರುಗಳು ನಮ್ಮಲ್ಲೇಕೆ ಉಪಯೋಗಕ್ಕೆತರಬಾರದು ತಮ್ಮ ಆಶಯವನ್ನು ವ್ಯಕ್ತಪಡಿಸುತ್ತಾರೆ. ಮುಂದೆ ಲೇಖಕರು ತಮ್ಮ ತಾಯಿನುಡಿ ಕನ್ನಡದಲ್ಲಿ ಹೆಂಡತಿಯನ್ನು ಕೂಗಲು ಮುದ್ದಿನ ಹೆಸರುಗಳು ಸಿಗುವುದು ಅಪರೂಪ, ಎಂದು ಹೇಳುತ್ತಾರೆ. ಸಂಸ್ಕೃತದಲ್ಲಿ ದಿವ್ಯವಾದ ಪದಗಳು ಇವೆ, ರಾಮನು ಸೀತೆಯನ್ನು ಪ್ರಿಯದರ್ಶಿನಿ ,ಜಾನಕಿ, ವರವರ್ಣಿನಿ, ಎಂದು ಕರೆದಿದ್ದಾನೆ. ಆದರೆ ಈ ಪ್ರಿಯೆ, ನಲ್ಲೆ, ಕಾಂತೆ,ಎಂದು ಕರೆಯಬೇಕಾದರೆ ನಾವು ಚಮಕಿ ಅಂಗಿ ತೊಟ್ಟು "ಹೊಸ ಡ್ರೆಸ್ಸು.ಹೊಸ ಸೀನರಿ" ಗಳಿಂದ ಮರೆಯುವ ರಂಗಸ್ಥಳದಲ್ಲಿ ನಿಲ್ಲಬೇಕು. ಇಂಗ್ಲೀಷ್ ನವರು ಡಿಯರ್, ಡಾರ್ಲಿಂಗ್,ಸ್ವೀಟ್,ಲವ. ಮುಂತಾದ ಪದಗಳನ್ನು ಉಪಯೋಗಿಸುತ್ತಾರಾದರು ಅವುಗಳನ್ನು ನಿಜ

ಜೀವನದಲ್ಲಿ ಬಳಸುವುದು ಅಸಾಧ್ಯ. ಕನ್ನಡಿಗರೆಲ್ಲರಿಗೂ ಇರುವಂತೆ ನನಗೂ ಮಾತೃಭಾಷೆಯಲ್ಲಿ ಅಮಿತವಾದ ಭಕ್ತಿ. ಆದರೆ ನಮ್ಮ ಹೆಂಡತಿಯನ್ನು ತಾಯ್ನುಡಿಯಲ್ಲಿ ಸಂಭೋಧಿಸುವುದು ಕಷ್ಟ ಎಂಬ ಕೊರಗು ಲೇಖಕರನ್ನು ಕಾಡಿದೆ.

<u>ದಿವಾನಖಾನೆಯ ಅಂದ ಚೆಂದ</u> :

ಈ ಪ್ರಬಂಧದ ವಸ್ತು ದಿವಾನಖಾನೆ. ಇಲ್ಲಿ ಲೇಖಕರು ದಿವಾನಖಾನೆಯ ಅಂದಚೆಂದದ ಬಗ್ಗೆ ಹೇಳುತ್ತಾ ದಿವಾನಖಾನೆ. ತಮ್ಮ ಮನೆಗೆ ಬಂದ ಬಗೆಯನ್ನು ಹೇಳಿದ್ದಾರೆ.ಹಲವಾರು ವರ್ಷ ಸರಳ ಜೀವನವನ್ನೇ ಕಳೆದ ಲೇಖಕರಿಗೆ ಲಲಿತೆಯು ತನ್ನ ಪರಿಚಯ ರೊಬ್ಬರು ಮನೆಗೆ ಅರಿಶಿನ ಕುಂಕುಮಕ್ಕೆ ಕರೆಯುತ್ತಾಳೆ. ಗುಮಾಸ್ತರಾಗಿದ್ದ ಆ ಮನೆಯ ರಾಯರು ' ಕೈಗಾರಿಕೆಯ ಕ್ಯಾಪ್ಟನ್' ಆದರೂ ತಮ್ಮ ಹೊಸ ಅಂತಸ್ತಿಗೆ ತಕ್ಕಂತೆ ದೊಡ್ಡ ಮನೆಯನ್ನು ಕಟ್ಟಿ ಅದನ್ನು ತಮಗೆ ಮೆಚ್ಚಿದ ರೀತಿಯಲ್ಲಿ ಅಳವಡಿಸಿದರು ಲಲಿತೆಯವರು ಅವರ ಮನೆಗೆ ಹೋದ ದಿನ ರಾಯರು ಪತ್ನಿ ತಮ್ಮ ದಿವಾನಖಾನೆಯನ್ನು ಬಹಳ ಹೆಮ್ಮೆಯಿಂದ ತೋರಿಸುತ್ತಾರೆ. ಅಲ್ಲಿಂದ ಲಲಿತೆ ತಮಗೆ ಬರುತ್ತದ್ದ ಮುನ್ನೂರು ರೂಪಾಯಿ ಸಂಬಳವನ್ನು ಮರೆತು ರಾಯರ ಮನೆಯ ದಿವಾನಖಾನೆಯನ್ನು ನೋಡಬಾರದೇ! ಅವರು ನನ್ನಷ್ಟು ಓದಿಲ್ಲದರಾದರೂ ಮನೆಯನ್ನು ಅದೆಷ್ಟು ಲಕ್ಷಣವಾಗಿಟ್ಟುಕೊಂಡಿದ್ದಾರೆ! ಈ ಅವಸ್ಥೆಯಲ್ಲಿ ಇಟ್ಟುಕೊಳ್ಳುವ ಭಾಗ್ಯಕ್ಕೆ ನಾವು ಅಷ್ಟು ದೊಡ್ಡ ಮನೆಯನ್ನು ಕಟ್ಟಿದ್ದಾದರೂ ಏಕೆ? ಎಂದು ಉಪನ್ಯಾಸ ಕೊಡುತ್ತಾರೆ ಆಗ ಲೇಖಕರಿಗೆ ಜ್ಞಾನೋಕಯವಾಗಿ ಇನ್ನು ಮುಂದಾದರೂ ಮನೆಯ ಶೃಂಗಾರದ ಕಡೆಗೆ ಸ್ವಲ್ಪ ಗಮನ ಕೊಡಬೇಕೆಂದು ನಿಶ್ಚಯಿಸುತ್ತಾರೆ. ಇದಾದ ಮೇಲೆ ಫರ್ನಿಚ್‌ರ್ ಅಂಗಡಿಗೆ ಹೋಗಿ ಇಬ್ಬರು ಕೊಡಬಹುದಾದ ಮೇಲೆ ಫರ್ನೀಚರ್ ಅಂಗಡಿಗೆ ಹೋಗಿ ಇಬ್ಬರು ಕೊಡಬಹುದಾದ ಸೋಫಾ. ಅದೇ ಮಾದರಿಯ ರುಚಿಗಳೆರಡು ಅದಕ್ಕೆ ಹೊಂದುವಂತಿದ್ದ ಟೀಪಾಯಿ ಕಂಚಿನಲ್ಲಿ ಕುಸುರುಯ ಕೆಲಸ ಮಾಡಿದ್ದ ಪುಷ್ಪಪಾತ್ರೆ- ನಾನೂರು ರೂಪಾಯಿ ತೆತ್ತು ಇದನ್ನೆಲ್ಲಾ ತರುತ್ತಾರೆ. ಅಂದಿನಿಂದ ಲಲಿತೆಯು ಮನೆಯ ಸೌಂದರ್ಯದ ಕಡೆಗೆ ಗಮನ ಕೊಡುತ್ತಾ ಆಗಾಗ ಉಪನ್ಯಾಸ ಕೊಡುತ್ತಿದ್ದರು. ಮನೆಯಲ್ಲಿ ಏನನ್ನೂ ಒರಗುವಂತಿರಲಿಲ್ಲ. ದಿವಾನಖಾನೆಯ ಮೇಲೆ ಕುಳಿತು ತಿಂದಿ ತಿನ್ನುವಂತಿರಲಿಲ್ಲ. ಮಕ್ಕಳು ಅದರ ಮೇಲೆ ಹತ್ತಿ ಆಟ ಆಡುವಂತಿರಲಿಲ್ಲ ಆದ್ದರಿಂದ ಲೇಖಕರು ಅಲ್ಲಿ ಕಾಡಿದುವುದನ್ನೆ ಬಿಟ್ಟುಬಿಡುತ್ತಾರೆ. ಒಳ ಕೊಠಡಿಯಲ್ಲಿ ನನ್ನ ಪೂರ್ವ ಸ್ನೇಹಿತರಾದ ಸುಂದರ್ ಕುರ್ಚಿಗಳಿವೆ. ಹಸಿವೆಯಾದಾಗ ನನ್ನೊಡನೆ ತಿಂದು ಬಾಯಾರಿದೆ ಆದಾಗ ನನ್ನೊಡಗೆ ಕುಡಿದಿರುವ ಹಳೆಯ ಮೇಜಿದೆ. ಅವುಗಳೊಡನೆ ನಾನು ಯಾವ ಸ್ವಾತಂತ್ರ್ಯವಹಿಸಿದ್ದರೂ ಎಷ್ಟು ಸಲಿಗೆಯಂದಿದ್ದರೂ ತಡೆಯುತ್ತದೆ. ಹಾಗಾಗಿ ಈಗಿನ ದಿವಾನಖಾನೆಯಲ್ಲಿ ಕಾಣುವ ಪಾಷಾಣ

ಹೃದಯದ ನಿಶ್ಚಲ ಸೌಂದರ್ಯ ನನಗೂ ಬೇಡ ನನ್ನ ಆತ್ಮೀಯರಿಗೂ ಬೇಡ ಎಂದು ತಮ್ಮ ಮನದಾಳದ ಮಾತನ್ನು ಹೇಳುತ್ತಾರೆ

**ಹರಕೆಗಳು :**

ಈ ಪ್ರಬಂಧದ ವಸ್ತು ಹರಕೆ. ಇಂದು ಯಾವುದೇ ಕೆಲಸ ಆಗಬೇಕಾದರೂ ಅವರ ಪ್ರಿಯದೇವರಲ್ಲಿ ಹರಕೆಗಳನ್ನು ಕಟ್ಟಿಕೊಳ್ಳುತ್ತಾರೆ. ನಮ್ಮ ಜನ ಹಾಗೆಯೇ ನಮ್ಮ ಲೇಖಕರ ಹೆಂಡತಿ ಲಲಿತೆ ಕೊಡ ಒಂದು ಹರಕೆಯನ್ನು ಕಟ್ಟಿಕೊಳ್ಳುತ್ತಾರೆ ಅದೇನೆಂದರೆ "ಅವರಿಗೆ ಕೆಲಸವಾದರೇ ಮೊದಲ ತಿಂಗಳ ಸಂಬಳವನ್ನು ಅರ್ಪಿಸುವುದಾಗಿ" ತಿರುಪತಿ ವೆಂಕಟರಮಣ ಸ್ವಾಮಿಗೆ ಹರಕೆ ಹೊತ್ತಿದ್ದರಂತೆ ವೆಂಕಟರಮಣಸ್ವಾಮಿಯ ಸಹಾಯವನ್ನು ಕೋರದಿದ್ದರೆ ನಿಮ್ಮ ಮುದ್ದು ಮುಖವನ್ನು ನೋಡಿ ಯಾರು ನೌಕರಿ ಕೊಡುತ್ತಿರಲಿಲ್ಲ ಎನ್ನುತ್ತಾರೆ. ದೇವರಲ್ಲಿ ನಂಬಿಕೆ ಇಲ್ಲದೆ ಲೇಖಕರು ಕಡೆಗೂ ಆ ಹರಕೆಯನ್ನು ಸಲ್ಲಿಸುವುದೇ ಇಲ್ಲಾ ತಿರುಪತಿಯ ಯಾತ್ರಿಕರು ಕೆಲವು ವೇಳೆ ಮಾತಾಡುವುದಕ್ಕೆ ಅವಕಾಶ ವಿಲ್ಲದಂತೆ ಬಾಯಿಬೀಗ ಹಾಕಿಕೊಳ್ಳುವ ಸೇವೆ ನಡೆಸುವುದುಂಟು ಒಂದು ಮಾತಿಗೆ ಪ್ರತಿ ಮಾತಾಡಿ ನಮ್ಮ ಪ್ರಾಣ ಹಿಂಡುವ ಈ "ಮಧುರಭಾಷಿಣಿ". ಯಾರು ಇಂಥ ಹರಕೆಯನ್ನಾದರೂ ಹೊತ್ತರೇ ದಾಂಪತ್ಯ ಜೀವನ ಎಷ್ಟೋ ಹಗುರ ವಾದೀತು! ಎಂದು ಹಾಸ್ಯ ಮಾಡುತ್ತಾರೆ.

ದೊಡ್ಡ ಮನುಷ್ಯರಿಂದ ನಾವು ಸಹಾಯ ಕೋರುವಾಗ ಅವರಿಗೆ ಲಂಚ ಕೊಡುವಂತೆ ದೇವರಿಗೂ ಕೂಡ ನಮ್ಮ ಜನ ವಿಘ್ನೇಶ್ವರನಿಗೆ ಇಡುಗಾಡಿ ಒಡೆದು ಶ್ರೀಕಂಠೇಶ್ವರನಿಗೆ ಶಾಲ್ಯಾನ್ನದ ಅಭಿಷೇಕ ಮಾಡಿಸಿ. ನರಸಿಂಹನಿಗೆ ಚಿನ್ನದ ಕಿರೀಟ ಹಾಕಿಸಿ ಮುಚ್ಚು ಮರೆಯೇನೋ ಇಲ್ಲದೇ ದೇವರಿಗೆ ಲಂಚ ಕೊಟ್ಟು ತಮ್ಮ ಕೆಲಸ ಮಾಡಿಸಿಕೊಳ್ಳಲು ಪ್ರಯತ್ನಸುತ್ತಾರೆ . ಯಾವ ಪ್ರತಿಫಲಾಪೇಕ್ಷೆಗಳು ಇಲ್ಲದೇ ದೇವರು ತಮ್ಮ ಕೋರಿಕೆ ನೆರವೇರಿಸುವುದಿಲ್ಲವೆಂಬುದು ಜನರ ನಂಬಿದೆ. ಆದ್ದರಿಂದ ಜನರು ತಮ್ಮ ಪ್ರತಿಯೊಂದು ಕೋರಿಕೆಗೂ ಹರಕೆ ಸಲ್ಲಿಸುವುದಾಗಿ ದೇವರಲ್ಲಿ ಕೇಳಿಕೊಳ್ಳುತ್ತಾರೆ. ಪ್ರಪಂಚದಲ್ಲಿ ದೇವರು ಇದ್ದಾನೋ ಇಲ್ಲವೋ ಗೊತ್ತಿಲ್ಲ. ಆದರೆ ಜನ ಈ ಹರಕೆಗಳ ಮೂಲಕ ದೇವರನ್ನು ಕಾಣುತ್ತಿದ್ದಾರೆ. ಮೂರ್ತಿರಾಯರು ಒಂದು ಗಾದೆಯನ್ನು ಹೇಳುತ್ತಾರೆ." ಮುಳುಗುತ್ತಿರುವಾಗ ಹುಲ್ಲಿನ ಕಡ್ಡಿಯನ್ನಾದರೂ ಹಿಡಿಯಬೇಕಂತೆ" ಆದ್ದರಿಂದಲೇ ಮಾನವನು ಕಂಡ ದೇವರಿಗೆಲ್ಲಾ ಹರಕೆಯುಟ್ಟು ಕೈ ಮುಗಿಯುತ್ತಾನೆ. ಇದು ಇಂದಿಗೂ ಪ್ರಸ್ತುತವಿದೆ.

ಕ್ಲೀಷಾ ಪ್ರವೀಣರ ಸಾಕ್ಷ್ಯ :

ಈ ಪ್ರಬಂಧದ ವಸ್ತು ಕ್ಲೀಷೆ. ಕ್ಲೀಷೆ ಎಂಬ ಪದ ಕನ್ನಡಕ್ಕೆ ಹೊಸದು ಜನಗಳ ಬಾಯಲ್ಲಿ ಸಾವಿರಾರು ಬಾರಿ ಬಿದ್ದು ಶಕ್ತಿಮೀರಿ ದುಡಿದು ಸತ್ವವನ್ನಲ್ಲಾ ಕಳೆದುಕೊಂಡು ಬೆಂಡಾಗಿರುವ ಪದ ಸಂಯೋಜನೆಗಳನ್ನು " ಕ್ಲೀಷೆ" ಎನ್ನುತ್ತಾರೆ

ಕ್ಲೀಷೆಯ ಬಗ್ಗೆ ಹೇಳುತ್ತಾ ಲೇಖಕರು ಮಾನವ ಸಮಾಜದಲ್ಲಿ ವೇಶ್ಯೆಯರಿದ್ದಂತೆ ಭಾಷಾ ಪ್ರಪಂಚದಲ್ಲಿ ಈ ಕ್ಲೀಷೆ. ಯಾರು ಬೇಕಾದರೂ ಅದರೊಡನೆ ಮೈತ್ರಿ ಬೆಳೆಸಬಹುದು ಅದಕ್ಕೂ ನಮಗೂ ಅಂತಃಕರಣ ಸಂಬಂಧವಿರಬೇಕೆಂಬ ನಿಯಮವೇನೂ ಇಲ್ಲ. ವೇಶ್ಯಾಲಂಪಟರು. ಹಣವನ್ನು ಕಳೆದುಕೊಳ್ಳುವಂತೆ ಕ್ಲೀಷಾಲಂಪಟರು ತಮ್ಮಲ್ಲಿ ಇದ್ದರೂ ಇರಬಹುದಾದ ಬುದ್ಧಿಶಕ್ತಿಯನ್ನು ಕಳೆದುಕೊಳ್ಳುತ್ತಾರೆ. ಒಂದು ವಿಧದಲ್ಲಿ ನೋಡಿದರೆ ವೇಶ್ಯೆಯರಿಗಿಂತ ಕ್ಲೀಷೆ ಮೇಲೆನ್ನಬಹುದು ವಿಟನ ಕೈ ಬರಿದಾದ ಮೇಲೆ ವೇಶ್ಯೆ ಅವನನ್ನು ಹೊರದೂಡುತ್ತಾಳೆ ಆದರೆ ಕ್ಲೀಷೆ ಆಪದ್ಬಂದು. ನಮ್ಮ ತಲೆ ಬರಿದಾಂತೆಲ್ಲಾ ಅವರ ಸ್ನೇಹ ಮತ್ತಷ್ಟು ಸ್ನಿಗ್ಧವಾಗುತ್ತದೆ. ಕ್ಲೀಷೆಯನ್ನು ಉಪಯೋಗಿಸದಿರಲಾಗುವುದಿಲ್ಲ. ಅದಿಲ್ಲದಿದ್ದರೆ. ಅನೇಕ ವೃತ್ತಪತ್ರಿಕೆಗಳು ದಿವಾಳಿಯೆದ್ದು ಹೋಗಬಹುದು: ಭಾಷಣಕಾರರ ಸ್ವರ ಉಡುಗಿಹೋಗಬಹುದು:

ವಿಮರ್ಷಕರ ಲೇಖನಿ ನಿಂತುಹೋಗಬಹುದು. ಸ್ವತಃ ಯೋಚನೆ ಮಾಡುವ ಶಕ್ತಿ ಇಲ್ಲದವರಿಗೆ. ಶಕ್ತಿಯಿದ್ದರೂ ಅಲಸರಾದವರಿಗೆ. ಯೋಚನೆಗೆ ವ್ಯವಧಾನವಿಲ್ಲದಿದ್ದರೂ ಭಾಷಣ ಮಾಡುವ ಅಥವಾ ಬರೆಯುವ ಚಟವಿರುವವರಿಗೆ ಇದು ನಿರಾಯಾಸವಾಗಿ ದೊರುಕುವ ನಿಧಿಯಿಂದು "ಕ್ಲೀಷೆ"ಯನ್ನು ಸಾಕ್ಷಿಯ ಮೂಲಕ ಗುಣಗಳನ್ನು ಹೊಗಳಿದ್ದಾರೆ.

ವ್ಯಾಘ್ರಗೀತೆ :

ವ್ಯಾಘ್ರಗೀತೆ_ಪ್ರಬಂಧದ ವಸ್ತು ಹುಲಿ. ಹುಲಿಯ ವೈಶಿಷ್ಟ್ಯತೆಯ ಬಗ್ಗೆ ಭರತಭೂಮಿಯ ಹುಲಿಯ ಬಗ್ಗೆ ಇಲ್ಲಿ ಲೇಖಕರು ಹೇಳಿದ್ದಾರೆ. ಹುಲಿ ಮೂಲತ: ಮಾಂಸಾಹಾರಿ. ಹುಲಿ ಪ್ರಾಣಿಗಳನ್ನು ಕೊಂದು ತಿನ್ನುವುದು.ಆದರೆ ನಿಷ್ಪಕ್ಷಪಾತವಾದ ದೃಷ್ಟಿಯಿಂದ ನೋಡಿದರೆ ಅದರ ತಪ್ಪೇನಿಲ್ಲ. "ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ. ಮಾಂಸವನ್ನೇ ಮೇಯಿಸುತ್ತಾನೆ." [6] ಎಂದು ವಚನ ಕೊಟ್ಟೇ ಹುಲಿಯನ್ನು ನಿರ್ಮಿಸಿದ್ದಾನೆ. ಆದರೆ ಯಾವ ನಾಡಿನಲ್ಲಿ ಶ್ರೀರಾಮನಂಥ ದೊರೆಗಳು ಆಳಿದರೋ. ಭಗವದ್ಗೀತೆಯಂಥ ಗ್ರಂಥ ಉದ್ಭವಿಸಿತೋ ಅಂದಿನಿಂದ ಭರತ ಭೂಮಿಯಲ್ಲಿ ಹುಟ್ಟಿದ ಹುಲಿಗಳ

--- ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 101

ಅಧರ್ಮಕ್ಕೆ ಎಡೆಗೊಡುವುದುಂಟೇ? ಎಂದು ಲೇಖಕರು ಹೇಳುತ್ತಾರೆ ಈ ವಿಷಯಕ್ಕೆ ಸಂಬಂಧಿಸಿದಂತೆ ತಮ್ಮ ಬಂಧು ಕೃಷ್ಣಮೂರ್ತಿ ತನ್ನ ವಂಶದವರೊಬ್ಬರ ಅನುಭವದ ಕಥೆಯನ್ನು ಇಲ್ಲಿ ವಿವರಿಸುತ್ತಾರೆ.

ಕೃಷ್ಣಮೂರ್ತಿಯ ಅಜ್ಜಂದಿರು ತುಮಕೂರು ಜಿಲ್ಲೆಯ ಒಂದು ಹಳ್ಳಿಯವರು. ಅವರ ಹಿರಿಯರು ಸಣ್ಣದೊಂದು ಸಂಸ್ಥಾನದಲ್ಲಿ ಮಂತ್ರಿಯಾಗಿದ್ದು ತಮ್ಮ ರಾಜಭಕ್ತಿಗಾಗಿ ಹೆಸರು ಪಡೆದವರು. ಕಥಾನಾಯಕರ ಕಾಲಕ್ಕೆ ಮಂತ್ರಿತ್ವ ಹೋಗಿ ಕೇವಲ ಶಾನುಭೋಗಿಕೆ ಮಾತ್ರಾ ಉಳಿದಿತ್ತು.ಆದರೂ ಶಾನುಭೋಗರು ತಮ್ಮ ವಂಶದ ಕೀರ್ತಿಗೆ ಕುಂದು ತರದಂತೆ ಖಿರ್ದಿ ಪುಸ್ತಕವನ್ನು ಕಾಪಾಡಿಕೊಂಡು ಬಂದಿದ್ದರು. ಒಂದು ಬಾರಿ ಅವರು ಇರಸಾಲಿಗಾಗಿ ಚಿಕ್ಕನಾಯಕನ ಹಳ್ಳಿಗೆ ಹೋಗಿ ಬರುವ ವೇಳೆಗೆ ಸಂಜೆ ಆಗಿ ಹೋಗಿತ್ತು. ಆ ದಟ್ಟವಾದ ಕಾಡಿನ ಮಧ್ಯೆ ನಡೆದು ಬರುವಾಗ ೊಂದು ಹುಲಿ ಆಕ್ರಮಣ ಮಾಡಲು ಯತ್ನಿಸುತ್ತದೆ. ಆದರೆ ಯಾರನ್ನೇ ಆಗಲಿ ಭರತಖಂಡದ ಹುಲಿಗಳು ಹಿಂದಿನಿಂದ ಹಾರಿ ಕೊಲ್ಲುವುದಿಲ್ಲ ಎಂದು ತಿಳಿದಿತ್ತು. ಆ ಕಾರಣವಾಗಿ ಹುಲಿಯ ಕಡೆಗೆ ಬೆನ್ನು ತಿರುಗಿಸಿ ನಡೆಯುತ್ತಿದ್ದರು. ಮೊದಲೇ ದಣಿವಾಗಿದ್ದ ಶಾನುಭೋಗರು ಕಲ್ಲನ್ನು ಎಡವಿ ನೆಲಕ್ಕೆ ಬಿದ್ದು ಮೂರ್ಛೆ ಹೋದರ. ಅವರು ಎಚ್ಚೆತ್ತಾಗ ಅವರ ಬಳಿ ಜನ ನಿಂತಿದ್ದರು.

ಶಾನುಭೋಗರು ಮೂರ್ಛೆಯಲ್ಲಿದ್ದಾಗ ನಡೆದದ್ದರು ಇಷ್ಟು: ಚಿಕ್ಕನಾಯಕನಹಳ್ಳಿಗೆ ತೆಂಗಿನಕಾಯಿ ತುಂಬಿಕೊಂಡು ಹೋಗಿದ್ದ ಕೆಲವರ ಜೊತೆಗೆ ಶಾನುಭೋಗರು ಹೋಗಿದ್ದರು. ನಡುವೆ ದಾರಿಯಲ್ಲಿ ಶಾನುಭೋಗರು ಪ್ರಜ್ಞೆತಪ್ಪಿ ಬೀಳುತ್ತಾರೆ. ಅದೇ ವೇಳೆಗೆ ಎದೆ ನಡುಗಿಸುವೆ ಹುಲಿಯ ಘರ್ಜನೆ ಕೇಳಿಸುತ್ತದ. ಎಷ್ಟೇ ಆದರೂ ಹುಲಿತೆಂದರೆ ಭಯವಲ್ಲವೇ! ಸ್ವಲ್ಪ ಹೊತ್ತು ಗಾಡಿಯ ಬಳಿಯಲ್ಲೇ ನಿಂತುನೋಡಿ ಕೋವಿಯಂಥ ಒಂದೆರಡು ತೋಟಾ ಹಾರಿಸಿ ಕೈಲಾದಷ್ಟು ಗಲಭೆ ಮಾಡುತ್ತಾ ಮುಂದುವರಿದರು. ಮೂರ್ಛೆಯಲ್ಲಿ ಬಿದ್ದಿದ್ದ ಶಾನುಭೋಗರನ್ನು ಕಂಡು ಮುಖದ ಮೇಲೆ ನೀರೆರಚಿ ಎಚ್ಚರಿಸಿದರು. ಏನೇ ಆದರೂ ಶಾನುಭೋಗರು ಉಳಿದದ್ದು ಹುಲಿಯ ಧರ್ಮಶ್ರದ್ಧೆಯಿಂದ ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ.

**ಕಾರ್ ರಿಪೇರಿ- ನೀನೇ ಮಾಡಿ ನೋಡು :**

ಈ ಪ್ರಬಂಧದ ವಸ್ತು "ಕಾರು" ನೀನೇ ಮಾಡಿನೋಡು" ತತ್ವ ಎಷ್ಟು ಸರಿ, ತಪ್ಪು ಎಂಬುದನ್ನು ಲೇಖಕರು ಕಾರನ್ನು ವಸ್ತುವಾಗಿಸಿಕೊಂಡು ತೋರಿಸಿಕೊಟ್ಟಿದ್ದಾರೆ. ಕಾರು ಇಟ್ಟುಕೊಳ್ಳುವುದಕ್ಕೆ ಬದಲಾಗಿ ಕಾರ್ ಇರುವ ಸ್ನೇಹಿತರನ್ನು ಸಂಪಾದಿಸಿ ಅದರಲ್ಲಿತಿರುಗುವುದಿ ಬುದ್ಧಿವಂತಿಕೆಯ ಲಕ್ಷಣ ಎನ್ನುವ ಲೇಖಕರು ಒಂದು ಕಾರನ್ನು ಕೊಳ್ಳುವ ಆಸೆಯನ್ನು ತಮ್ಮ ಸ್ನೇಹಿತ ಗೋಪಾಲನಿಗೆ

ಹೇಳುತ್ತಾರೆ. ಗೋಪಾಲ ಲೇಖಕರಿಗಾಗಿ ಬೆಂಗಳೂರಿನಲ್ಲೆಲ್ಲಾ ಸುತ್ತಾಡಿ ಕೊನೆಗೆ ಒಂದು ಮಾರಿಸ್ ಮೈನ್ ಕಾರನ್ನು ತರುತ್ತಾನೆ. ಮನೆಗೆ ಬಂದವನೇ " ನಿನ್ನ ಕಾರು ಹೇಗೆ ಓಡುತ್ತೆ ತೋರಿಸುತ್ತೇನೆ ಬಾ" ಎಂದು ಕರೆದ. ಆ ಕಾರು ನೋಡಲು ತುಂಬಾ ಚೆನ್ನಾಗಿತ್ತು. ಆದರೆ ಎಷ್ಟು ಸ್ಟಾರ್ಟ ಮಾಡಿದರೂ ಆಗಲಿಲ್ಲ. ಕೊನೆಗೆ..'ನೀನೆ ಮಾಡಿನೋಡು' ಎಂಬ ಜಾಹೀರಾತಿನ ತತ್ವದ ಮೇರೆಗೆ. ಕಾರ್ಬೋರೇಟರ್ ಬಿಚ್ಚಿ. ನೆಲಕ್ಕೆ ಕೆಡವಿ ಮತ್ತೆ ಹುಡುಕಿ ಕಾರ್ಬೋರೇಟರನ್ನು ಜೋಡಿಸಿದ್ದಾಯಿತು. ಆದರೂ ಕಾರು ಸದ್ದು ಮಾಡಲಿಲ್ಲಿ. ಆಗಲೇ ಸ್ಪಾರ್ಕ್ ಪ್ಲಗ್ಗಿನ ತಂತಿ ಅಳ್ಳಕವಾಗಿದೆ. ಎಂದು ಅದಕ್ಕೆ ಏನೋ ಇಲಾಜು ಮಾಡಿದು ಕೊನೆಗೆ ಕಾರು ಸ್ಟಾರ್ಟ ಆಯಿತು. ಹತ್ತುಗಜ ಹೋಗುವುದರೊಳಗೆ ಎಂಜನ್ನಿನಿಂದ ಹೊಗೆ ಬರಲು ಆರಂಭವಾಯಿತ. ಗ್ಯಾರೇಜಿಗೆ ಹೋಗಿ ತೋರಿಸಿದಾಗ ಮೆಕ್ಯಾನಿಕ್ ಹೇಲಿದ "ಷಾರ್ಟ ಸರ್ಕ್ಯೂಟ್ ಆಗಿ ಡೈನೋಮೋ ಸುಟ್ಟು ಹೋಗಿದೆ. ಹೊಸದು ಹಾಕಿಸಬೇಕು. ಇದನ್ನು ನೀವೇ ಮಾಡಿದರಾ? ಅದೇ ಒಳ್ಳೆಯದು ಸ್ವಾಮು. ಒಂದೊಂದು ವೇಳೆ ಎಂಜಿನಿಯರಿಂಗ್ಗೆ ಬದಲಾಗಿ ಆಂಜನಿಯರಿಂಗ್ ಆಗುತ್ತೆ. ಏನು ಮಾಡುವುದು! ಎಡವದೆ. ನಡೆಯಲು ಸಾಧ್ಯವೇ! "[7] ಎನ್ನುತ್ತಾನೆ. ಗೋಪಾಲ ಆಂಜನಿಯರಿಂಗ ಮಾಡಿದ್ದರ. ಫಲವಾಗಿ ನೂರ ಐವತ್ತು ರೂ ಕೊಟ್ಟು ಬರಬೇಕಾಯಿತು.

' ಕಾರ್ ರಿಪೇರಿ ನೀನೇ ಮಾಡಿನೋಡು' ಎಂಬ ಘೋಷಣೆಯ ಒಳಗುಟ್ಟೇನು ಎಂದು ಲೇಖಕರು ಈ ರೀತಿ ಹೇಳುತ್ತಾರೆ. ರಿಪೇರಿ ನೀವೇ ಮಾಡಿದ್ದರಿಂದ ಹಣವೇನೂ ಉಳಿಯುವುದಿಲ್ಲ. ಕಾರಿನ ಯಂತ್ರ ಮತ್ತಷ್ಟು ಕೆಟ್ಟು ವರ್ಕಷಾಪಿನವರ ಮತ್ತು ಗ್ಯಾರೇಜಿನವರ ಜೇಬಿಗೆ ಮತ್ತಷ್ಟು ಹಣ ಸೇರುತ್ತದೆ. ಈ ಕೂಗನೆಬ್ಬಿಸುವವರು ಅವರಿರಬೇಕು ಅಥವಾ ಅವಕ್ಕೆ ದಳ್ಳಾಳಿಗಳಿರಬೇಕು ಎಂದು ಒಳಗುಟ್ಟನ್ನು ಬಯಲು ಮಾಡುತ್ತಾರೆ." ಮಾಡುವುದು ನೋಡುವುದು" ಇವೆರಡರಲ್ಲಿ ಅವರಿಗೆ ಪ್ರಿಯವಾದ ನೋಡುವುದನ್ನು ಆರಿಸಿಕೊಳ್ಳುವ ಲೇಖಕರು ನೋಡುವದೇನೂ ಸುಲಭವಲ್ಲ ಎಂದು ಹೇಳುತ್ತಾರೆ. ಮಾಡುವ ಕೆಲಸ ಕೈಚಳಕಕ್ಕೆ ಸಂಬಂಧಪಟ್ಟದ್ದು ಅಭ್ಯಾಸದಿಂದ ಅದನ್ನು ಕಲಿಯಬಹುದು ಆದರೆ ನೋಡುವುದೆಂದರೆ ಕವಿಗೆ ದರ್ಶನ: ಅದು ಸ್ಪೂರ್ತಿಗೆ ಸಂಬಂಧಪಟ್ಟಿದ್ದು ಕೇವಲ ಅಭ್ಯಾಸಕ್ಕಲ್ಲ ಕಣ್ಣೆದುರಿಗಿರುವ ನೂರೆಂಟು ಅಂಕಗಳ ಜಟಿಲತೆಯ ಮೇಲೆ ಸಮಗ್ರವಾದ ದೃಷ್ಟಿಯನ್ನು ಬೀಸಿ, ಮಿಂಚಿನ ವೇಗದಿಂದ ಅವುಗಳ ಪರಸ್ಪರ ಸಂಬಂಧವನ್ನು ಗ್ರಹಿಸಿ ಅವುಗಳ ನಿಜರೂಪವನ್ನು ಕಂಡು ಎದಮಿತ್ಥಂ ಎಂದು ಹೇಳುವುದೇನು ಸುಲಭದ ಕೆಲಸವಲ್ಲ. ಅ್ರ ಕಷ್ಟ ಗೊತ್ತಾಗಬೇಕಾದರೇ 'ನೀವೇ ಮಾಡಿ ನೋಡಿ." ಎಂಭ ಸಲಹೆಯನ್ನು ಲೇಖಕರು ಓದುಗರಿಗೆ ಕೊಟ್ಟಿದ್ದಾರೆ.

--- ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 112

ಮಹಾರಾಜ ಕಾಲೇಜಿನ ಕಾಮನ್ ರೂಮ್

ಈ ಪ್ರಬಂಧದ ವಸ್ತು "ಕಾಮನ್ ರೂಮ್" ಮಹಾರಾಜ ಕಾಲೇಜಿನಲ್ಲಿ ಅಧ್ಯಾಪಕರು ವಿಶ್ರಾಂತಿ ತೆಗೆದುಕೊಳ್ಳಲು ಇರುವ ಕೊಠಡಿಗೆ ಕಾಮನ್ ರೂಮ್ ಎಂದು ಕರೆಯಲಾಗುತ್ತದೆ. ಲೇಖಕರು ಈ ಪ್ರಬಂಧದಲ್ಲಿ ಮೊದಲಿಗೆ ಒಂದಾನೊಂದು ಕಾಲದಲ್ಲಿ ಮಹಾರಾಜ ಕಾಲೇಜಿನ ಅಧ್ಯಾಪಕರು ಧರಿಸುತ್ತಿದ್ದ ಗೌನುಗಳ ಬಗ್ಗೆ ತಿಳಿಸುತ್ತಾರೆ. ಮುಂದುವರೆದಂತೆ ಕಾಮನ್ ರೂಮಿನ ಪ್ರಸ್ತಾಪ ಮಾಡುತ್ತಾರೆ.

ಕಾಮನ್ ರೂಮ್ ಎಂಬುದು ಮಹಾರಾಜ ಕಾಲೇಜಿನಲ್ಲಿದ್ದ ಅಧ್ಯಾಪಕರ ವಿಶ್ರಾಂತಿ ಕೊಠಡಿ. ಹೊಸಬನೊಬ್ಬ ಅಧ್ಯಾಪಕ ವರ್ಗಕ್ಕೆ ಸೇರಿ ಕಾಮನ್ ರೂಮಿಗೆ ಬಂದರೆ ಹಳಬರು ಅವನನ್ನು ಬಾಚಿ ತಬ್ಬುತ್ತಿದ್ದರು ಅವನಿಗೆ ಕಾಫಿ ತಿಂಡಿಗಳನ್ನು ತರಿಸಿಕೊಟ್ಟು ಅವನ ರೂಪ ಬಟ್ಟೆ ಬರಹಗಳು ನಡಿಗೆಯ ವೈಖರಿ ಎಲ್ಲರಿದರ ಮೇಲೂ ಮನಬಂದಂತೆ ಹಾಸ್ಯದ ಟೀಕೆ ಮಾಡಿ ಅವನ ಹಿಂಜರಿಕೆ ಸಂಕೋಚಗಳನ್ನು ಹೋಗುಲಾಡಿಸಿ ಕಾಮನ್ ರೂಮಿನ ಆವರಣಕ್ಕೆ ತಕ್ಕಂತೆ ಅವನನ್ನು ಪಳಗಿಸುತ್ತಿದ್ದರು ಕಾಮನ್ ರೂಮಿನ  ವೈಶಿಷ್ಟವನ್ನು ಹೇಳುತ್ತಾ ಪ್ರಾಧ್ಯಪಕರೆನ್ನಿಸಿಕೊಂಡವರು ಕಾಮನ್ ರೂಮಿನ ಸದಸ್ಯರಾಗಿರಕೂಡದೆಂದು ಅನುಕ್ತವಾದ ನಿಯನವಿತ್ತಾ ಆಗ ಕಾಮನ್ ರೂಮಿನಲ್ಲಿದ್ದವರಲ್ಲಿ ಸುಮಾರು ಹತ್ತು ಹದಿನೈದು ಜನ  20–30 ವರ್ಷದವರು ಸ್ವಲ್ಪ ಹೆಚ್ಚು ವಯಸ್ಸಾದವರು ಐದಾರು ಜನ ಇದ್ದರು ಆಗ ಕಾಲೇಜಿನಲ್ಲಿ ಪ್ರದರ್ಶಿತವಾದ ನಾಟಕಗಳಲ್ಲಿ ಪಾತ್ರವಗಿಸುತ್ತಿದ್ದವರೂ ನಮ್ಮವರೇ ಪ್ರದರ್ಶನವಾದ ಹದಿನೈದು ದಿನ ಮುಂಚೆ ಅದು ಮುಗಿದ ಮೇಲೆ ಹದಿನೈದು ದಿನ ಅವರು ಮಾಡಿಲ್ಲದ ಮಾಡಿದ ಮಾಡಬಹುದಾಗಿದ್ದ ಎಲ್ಲಾ ತಪ್ಪುಗಳನ್ನು ಲೆಕ್ಕಹಾಕಿ ಹಾಸ್ಯ ಸಾಗರದಲ್ಲಿ ಅದ್ದಿ ತೆಗೆಯುತ್ತಿದ್ದವು. ಎಂದು ಹೇಳುತ್ತಾರೆ. ಕಾಮನ್ ರೂಮು ಒಂದು ದಿನ ಶುಭಲಗ್ನದಲ್ಲಿ ಪೊರೆ ಕಳಿದ ಹಾವಿನಂತೆ ತನ್ನ ಹಳೆಯ ಹೊದಿಕೆಯನ್ನು ಕಿತ್ತೊಗೆದು ' ಆರೆಂಜ್ ಕ್ಲಬ್'  ಆಗಿ 1930–31 ರಲ್ಲಿ ಅದಕ್ಕೆ ಹೊಸದಾಗಿ ನಾಮಕಾರಣವಾಯಿತು  ಈ ಕ್ಲಬ್ ನ್ನು ಸ್ಥಾಪಿಸಿದ ಕೀರ್ತಿ ಶ್ರೀ ಸಿ. ಆರ್. ನರಸಿಂಹಶಾಸ್ತ್ರಿ ಗಳಿಗೆ ಸಲ್ಲುತ್ತದೆ.

ಮುಂದುವರೆದ ಹೇಳುತ್ತಾ ಕಾಮನ್ ರೂಮನ್ನು ನಿಜವಾಗಿ ಸೃಷ್ಟಿಸಿದವರು ಯುವಕರು ಅದರ ಚರಿತ್ರೆಯಲ್ಲಿ ಅವರದ್ದೇ ಮುಖ್ಯ ಪಾತ್ರ. ನನ್ನ ಮಾನಸಿಕ ಜೀವನ ಮತ್ತು ಭಾವಜೀವನ ಹೆಜ್ಜೆ ಹೆಜ್ಜೆಗೂ ಅವರ ಜೀವನದೊಡನೆ ಸಾಗಿತು. ಉತ್ಸಾಹ ಬೇಸರ ಆನಂದ ಸಂಕಟ - ಎಲ್ಲದರಲ್ಲೂ ಅವರು ಭಾಗಿಗಳಾಗಿದ್ದರು. ಹೀಗೆ ಹಿರಿಯರು ಕಿರಿಯರಿಂದ ರೂಪಗೊಂಡ ಕಾಮನ್ ರೂಮ್ 1940 ರ ಸಂದರ್ಭದಲ್ಲಿ ಸಂಸ್ಥಾನದ ಮೂಲೆ ಮೂಲೆಗಳಲ್ಲೂ ಇಂಟರ್ ಮೀಡಿಯೆಟ್ ಕಾಲೇಜುಗಳು ಹುಟ್ಟಿ ಮೈಸೂರು ಬೆಂಗಳೂರಿನಿಂದ ಅಧ್ಯಾಪಕರುಗಳನ್ನು ಸೆಳೆದುಕೊಂಡು ಆರೆಂಜ್ ಕ್ಲಬ್ಬಿನ ಸದಸ್ಯರೆಲ್ಲಾ

ಚದುರಿಹೋದರು ಆದರೆ ಕ್ಲಬ್ ಮಾತ್ರ ' ಜೀವಂತವಾಗಿಯೋ ಇದೆ. ಈಗ ಅದರ ವಾಸಸ್ಥಾನ ಮಹಾರಾಜ ಕಾಲೇಜಿನ ಕಾಮನ್ ರೂಮಿನಲ್ಲಿ ಕಳೆದ ಸಿಹಿ ಕ್ಷಣಗಳನ್ನು ಇಲ್ಲಿ ಮೆಲುಕು ಹಾಕಿದ್ದಾರೆ.

<u>ಟೆಲಿಫೋನ್</u> :

ಈ ಪ್ರಬಂಧದ ವಸ್ತು ಟೆಲಿಫೋನ್ ಲೇಖಕರು ಈ ಪ್ರಬಂಧದಲ್ಲಿ ಟೆಲಿಫೋನ್ ನಿಂದ ಆಗುವ ಅನಾನುಕೂಲಗಳನ್ನು ತಿಳಿಸಿದ್ದಾರೆ. ನಿಮ್ಮ ಮನೆಗೆ ಟೆಲಿಫೋನ್ ಸಂಬಂಧ ಇಟ್ಟುಕೊಳ್ಳುವ ಗೊಡವೆಗೆ ಹೋಗಬೇಡಿ ನನ್ನ ಅನುಭವದಿಂದ ಹಿತಚಿಂತಕನಾಗಿ ಹೇಳುವ ಮಾತು " ತನಗೆ ಟೆಲಿಫೋನ್ ಇಟ್ಟುಕೊಳ್ಳುವ ಯೋಗ್ಯತೆಯಿಲ್ಲ ನಾವು ಇಟ್ಟುಕೊಂಡರೆ ಸಹಿಸಲಾರ" ಎಂದು ಬಾಲವಿಲ್ಲದ ನರಿಯ ಕಥೆಯನ್ನು ನೆನಪಿಗೆ ತಂದುಕೊಳ್ಳಬೇಡಿ. ನಾನು ಒಂದಾನೊಂದು ಕಾಲದಲ್ಲಿ ಟೆಲಿಫೋನ್ ಹೊಂದಿದ್ದವನೇ ಎಂದು ತಮ್ಮ ಅನುಭವವನ್ನು ವ್ಯಕ್ತಪಡಿಸುತ್ತಾರೆ.

ಲೇಖಕರು ಒಂದು ದಿನ ಬೆಳಗ್ಗೆ ತಮ್ಮ ಮೇಲಧಿಕಾರಿಯಿಂದ ಫೋನ್ ಬರುವ ನಿರೀಕ್ಷೆ ಇತ್ತು ಅಂತೆಯೋ ಘಂಟೆ ಹೊಡೆಯಿತು. ಆದರೆ ಗ್ರಾಹಿಯಿಂದ ಕೇಳಿಬಂದದ್ದು ಅಪರಿಚಿತರ ಧ್ವನಿ ಆ ಪ್ರಾಣಿಗೆ ' ನೀವೂ ಯಾರೂ "? ಎಂದು ಕೇಳುವಷ್ಟು ತಾಳ್ಮೆ ಇಲ್ಲದೇ "ನೋಡ್ರೀ ಮಗ್ಗಿಲ ಅಂಗಡಿಯಿಂದ ಮಾತಾಡುತ್ತಾ ಇರೋದು ಮೂರು ಕಪ್ಪು ಕಾಫಿ ಕಳಿಸಿ ಇಲ್ಲಗೆ " ಎಂದು ಪದೇ ಪದೇ ಮಾತು ಬೆಳೆಸಿ ಹೇಳುತ್ತಾನೆ ಇದ್ದರಿಂದ ಬೇಸರಗೊಂಡ ಲೇಖಕರು ಫೊನ್ ಇಡುತ್ತಾರೆ ಮತ್ತೆ ರಿಂಗ್ ಆದಾಗ ಈತನೇ ಇರಬಹುದೆಂದು ರೇಗಿ " ನಿಮ್ಮಪ್ಪ ಅನಂದಭವನ ನಿಮ್ಮ ತಾತ' ! ಎಂದು ಕಿರುಚಿ ಗ್ರಹಿಯನ್ನು ಕೆಳಕ್ಕೆ ಬಡಿಯುತ್ತಾರೆ. ಆದರೆ ಮೂರನೆ ಸಾರಿ ಫೋನ್ ಮಾಡಿದವನು ಅಂಗಡಿಯವನಲ್ಲಿ ನಮ್ಮ ಮೇಲಿನ ಅಧಿಕಾರಿ.

ಇದೇ ರೀತಿ ತಮ್ಮ ಮಿತ್ರರಿಗಾದ ಅನುಭವವನ್ನು ತಿಳಿಸುತ್ತಾರೆ. ಅವರು ದೊಡ್ಡದೊಂದು ಉತ್ಸವದ ಕಾರ್ಯ ನಿರ್ವಾಹಕರಾಗಿದ್ದರು ತಮ್ಮ ಅಸಿಸೆಂಗ್ಗೆದೆ ಏನೇ ಹೇಳಬೇಕಾಗಿದನ್ನು ಕೊನೆಯ ಘಳಿಗೆಯವರೆಗೂ ಮರೆತಿದ್ದು ಆಗ ಆತುರದಲ್ಲಿ ನಂಬರ್ ತಿರುಗಿಸಿದರು ಫೋನಿನಲ್ಲಿ " ಎಂಗೇಜ್ " ಸದ್ದು ಕೇಳಿತು ಹೀಗೆ ಮೂರು ನಾಲ್ಕ ಸಾರಿ ಮಾಡಿ ಫಲವಿಲ್ಲದೇ ಬೇಸರವಾಗಿ ಮನಸ್ಸಿನಲ್ಲಿ ಕಾವು ವರಿ ಅಸಿಸ್ಟೆಂಟ್ರ ರ ಮೇಲೆ ಕೇಗುವುದಕ್ಕೆ ಬೇಕಾದ ಪೂರ್ವ ಸಿದ್ಧತೆ ನಡೆದಿತ್ತು ಮತ್ತೆ ನಂಬರ್ ಒತ್ತಿದಾಗ "ರಿಂಗ್ ' ಕೇಳಿಸಿತು ಹಲೋ ಹಲೋ ಪೀಠಿಕೆ ಮುಗಿದ ಮೇಲೆ ಸಂಭಾಷಣೆ ಈ ರೀತಿ ನಡೆಯಿತು.

" ಯಾರ್ರೀ ಮಾತಾಡೋದು"? ಪ್ರಶ್ನೆ ಕೇಳಿದರು ಲೇಖಕರು ಮಿತ್ರರು

" .. _ .. ,,,,,, ರಾವ್.

" ಆ. ,,,,, ಏನಂದಿರಿ"?

",,,,,,,,,,,,,ರಾವ್ "

" ಯಾವ ರಾವ್ ರೀ? ಗಟ್ಟಿಯಾಗಿ ಮಾತಾಡುವುದಕ್ಕೆ ಏನು ಬಂದಿದೆ? ಗಂಟಲು ಕೊತು ಹೋಗಿದೆಯೊ? ಬಿಸಿಬಿಸಿಯಾಗಿ ಬಾದಾಮಿ ಹಾಲು ಕುಡುಯಿರಿ ಮೆಣಸಿನ ಕಷ್ಟಾಯ ತಗೊಳ್ಳ ಯಾವ ರಾವ್ ರೀ ? " ಮೈಸೂರಿನ ದಿವಾನ್ ರಾವ್"

ಗ್ರಾಹಿ ನನ್ನ ಮಿತ್ರನ ಕೈಯಿಂದ ಜಾರಿ ಬಿದ್ದತು ಟೆಲಿಫೋನ್ ಮಾಡಿದವನು ನಾನು ಎಂದು ದಿವಾವರಿಗೆ ಗೊತ್ತಾದೆರೆ ಗತಿಯೋನು ಎಂದು ಪರದಾಡಿದ್ದು ಉಂಟು ಟೆಲಿಫೊನ್ ಇದ್ದರೇ ನಿಮಗೆ ಸಾಲ ಕೊಟ್ಟವನೋ ನಿಮಿಂದ ಸಾಲ ಬೇಡುವವನೋ ಯಾವುದೋ ಸಬೇಗೆ ಅದ್ಯಕ್ಷತೆ ವಹಿಸಿ ಎಂದೋ ಮನೆಗಂದಾಯ ದವರೋ ಚಂದಾ ಕೇಳುವವರೋ ಫೋನ್ ಮಾಡಿ ತಲೆ ತಿನ್ನಬಹುದು ಆದ್ದರಿಂದ ಗಿಳಿಯನ್ನು ಸಾಕಿದರೆ ಅದು ಸಾಕಿದವನ ಹಾನಿಯನ್ನೆ ಕೋರುತ್ತದಂತೆ ಟೆಲಿಫೋನ್ ಯಂತ್ರವನ್ನು ಸಾಕಿದರೂ ಹಾಗೆಯೋ ಅದನ್ನು ಮನೆಗೆ ಸೇರಿಸಬೇಡಿ ಬದಲಾಗಿ ಎದುರು ಮನೆಯವರು ಅದನ್ನು ತಂದಿಟ್ಟುಕೊಳ್ಳವಂತೆ ಉತ್ತೇಜನನೀಡಿ ಅವರ ತೊಂದರೆಯಲ್ಲಾ ಅವರಿಗೆ ಪ್ರಯೊಜನ ಮಾತ್ರಾ ನಿಮಗೆ ಎಂದು ಹಾಸ್ಯದ ಸಲಹ ಕೊಡುತ್ತಾರೆ.

**ಸಾಹಿತಿಯ ಚಹರೆ:-**

ಈ ಪ್ರಬಂಧದ ವಸ್ತು ಸಾಹಿತಿ ಸಾಹಿತಿಯ ಚಹರೆಯನ್ನು ಕುರಿತು ಲೇಖಕರು ಇಲ್ಲಿ ಹೇಳಲು ಯತ್ನಿಸಿದ್ದಾರೆ. ಸ್ವತಃ ಸಾಹಿತಿಯಾದ ಮೂರ್ತಿರಾವ್ ರವರು " ಯಾರಿಗೇ ಆಗಲಿ ಆತ್ಮ ಪರಿಕ್ಷೆ ಕಷ್ಟಸಾಧ್ಯವಾದ ಕೆಲಸ ಸಾಹಿತ್ಯಗಳೂ ಈ ಮಾತಿಗೆ ಹೊರತಲ್ಲ ಆದ್ದರಿಂದ ಸಾಹಿತಿಯ ವಿಷಯವಾಗಿ ಲೇಖನ ಬರೆಯುವುದು ಸ್ವತಃ ಸಾಹಿತಿಯಲ್ಲದಿದ್ದರೆ ಒಳ್ಳೆಯದು " ಎಂದು ಹೇಳುತ್ತಾ ಈ ಪ್ರಬಂಧವನ್ನು ಬರೆಯುತ್ತಾರೆ.

ಈ ಪ್ರಪಂಚವು ಸಾಹಿತಿ ಇದ್ದಾಗ ಕನಕಾಭಿಷೇಕ ಮಾಡಲುಧಾವಿಸಿ ಒಂದು ಕ್ಯೂ ನಿಲ್ಲುವಿದಿಲ್ಲ ಅವನು ಸಾಯುವವರೆಗೂ ಕಾದಿದ್ದು ಸತ್ತ ಮೇಲೆ ಅವನ ಗೋರಿಗೆ ಪುಷ್ಪಾಂಜರಿಯನ್ನು ಅರ್ಪಿಸುತ್ತದೆ.

**ಉದಾಹರಣೆಗೆ:-** ಹೋಮರನು ಬದುಕಿದ್ದ

ಐವತ್ತು ನಗರಗಳ ಬೀದಿಬೀದಿಗಳಲ್ಲಿ

ತಂಗೂಳ ತಿಂದು ತಿಂದು



ಹೋಮರನು ಸತ್ತಾಯ್ತು

ಐವತ್ತು ನಗರಗಳು ಸ್ವರ್ದೆಯನ್ನು ಹೂಡಿದವು

"ನಮ್ಮವನು ಹೋಮರ್" ಎಂದು



ಲೇಖಕರು ಎರಡು ಬಗೆಯ ಸಾಹಿತಿಗಳನ್ನು ಗುರುತಿಸುತ್ತಾರೆ. ಮೊದಲ ಬಗೆಯವರು ಜ್ಞಾನದಾನ ಮಾಡಲು ರಾಜ್ಯಶಾಸ್ತ್ರ ಅರ್ಥಶಾಸ್ತ್ರ ಸಮಾಜಶಾಸ್ತ್ರ ಮುಂತಾದವುಗಳು ಕುರಿತು ಬಗೆಯುವರು ಇವರಿಗೆ ನಮ್ಮಲ್ಲೀ ಅಷ್ಟೇನೂ ಪುರಸ್ಕಾರ ದೊರೆತಿಲ್ಲ ಇನ್ನೊಂದು ಬಗೆ ಬರೆಯುವವರು ಶುದ್ಧ ಸಾಹಿತ್ಯವನ್ನು ಅಂದರೆ ಕಥೆ ಕಾದಂಬರಿ ಕವನ ಮುಂತಾದವುಗಳನ್ನು ಬರೆಯುವವರು ಇವರು ತಾವು ಬರೆದ ಕೃತಿಗಳನ್ನು ಕೇವಲ ಬರವಣಿಗೆಯೊಂದು ಭಾವಿಸುವುದಿಲ್ಲ ಬ್ರಹ್ಮ ಸೃಷ್ಟಿಯಂತೆ ಅವು ಒಂದು ಬಗೆಯ ಸೃಷ್ಟಿ ಎಂದು ಹೇಳುತ್ತಾರೆ. ಅಲ್ಲದೇ ಲೇಖಕರು ನಮಗೂ ಸಾಹಿತಿಗೂ ಇರುವ ಸೂಕ್ಷ್ಮದೃಷ್ಟಿಯ ವ್ಯತ್ಯಾಸವನ್ನು ಇಲ್ಲಿ ತಿಳಿಸುತ್ತಾರೆ ನಮ್ಮಂಥವರು ಯಾರನ್ನಾದರೂ ನೊಡಿದಾಗ " ಇವನು ಕಪ್ಪಗಿದ್ದಾನೆ ಆದರೆ ಸಾಹಿತಿಗಳಿಗೆ ಅಷ್ಟು ಸಾಲದು ಅವರ ಕಣ್ಣು ಯಾರ ಮೇಲೆ ಬಿದ್ದರೂ ಅವರ ಹೃದಯವನ್ನು ಕೊರೆದು ಒಳಗೆ ಇಣುಕಿ ನೋಡುತ್ತದೆ. " ನಿಮ್ಮ ಒಳಗುಟ್ಟುವನೇ ಇರಲಿ ನನ್ನಿಂದ ಮುಚ್ಚಿಡಲಾರಿರಿ " ಎನ್ನು ಏಂತಿರುತ್ತದೆ. ಅವರ ನೋಟ ಎಂದು ತಿಳಿಸುತ್ತಾರೆ.

ಪ್ರಬಂಧದ ಕೊನೆಯಲ್ಲಿ ಲೇಖಕರು ತತ್ವಶಾಸ್ತ್ರವೇತ್ತರಿಗೆ ಒಪ್ಪುವಂತೆ ನಾನು ಸಾಹಿತಿಗಳ ಲಕ್ಷಣ ಹೇಳಿದ್ದೇನೆಯೋ ಇಲ್ಲವೊ ತಿಳಿಯದು ಆದರೆ ಸಾಹಿತಿಗಳ ಪ್ರತ್ಯಕ್ಷ ಪರಿಚಯ ಬೇಕೆನ್ನುವರು ಅವರು ಏರ್ಪಡಿಸುವ ಸಮಾರಂಭಗಳಿಗೆ ಹೇಗಾದರೂ ಹೋಗಬೇಕು ಅಲ್ಲಿ ನಡೆಯುವ ವಾಚನಸಲ್ಲಾಪಗಳಿನ್ನು ಸ್ವತ ಕೇಳಬೇಕೆಂದು ಸಲಹೆ ನೀಡುತ್ತಾರೆ ಹಾಗೆಯೋ " ಸಹಸ್ರಶೀರ್ಷಾಪುರುಷಸ್ಯಜಸ್ರಾಕ್ಷಸ್ಯಹ ಸ್ರಪಾತ್" ಆದ ಸಾಹಿತಿ ರೂಪವನ್ನು ಒಂದು ಸೂತ್ರದಲ್ಲಿ ಸೆರೆಹಿಡಿಯಲು ನಾನು ಯಾರು ! ಎಂದು ಹೇಳಿರುವುದು ಲೇಖಕರು ದೊಡ್ಡ ಗುಣ.

<u>ಸಣ್ಣ ಕಥೆಯ ಹಾವಳಿ</u> :

ಈ ಪ್ರಬಂಧದ ವಸ್ತು ಸಣ್ಣ ಕಥೆ. ಸಣ್ಣ ಕಥೆ ಬರೆಯುವರು ಪಾಡನ್ನು ಕುರಿತು ಹೇಳಿದ್ದಾರೆ ಈ ಪ್ರಬಂಧದಲ್ಲಿ ಸಣ್ಣ ಕಥೆಗಳನ್ನು ಬರೆದು ಲೇಖಕರು ಗುರುತಿಸಿದ್ದಾರೆ ಈ ಕಾಲದಲ್ಲಿ ಸಣ್ಣಕಥೆ

ಬರೆಯುವುದು ಕಷ್ಟಕರವೆಂಬುದು ಲೇಖಕರು ಅಭಿಪ್ರಾಯ ಪ್ರಾರಂಭದಲ್ಲೇ ಕಥಾ ವಸ್ತು ಯಾವುದು ಯಾವ ವಿಷಯ ಕುರಿತು ಬರೆಯೋಣ ಎಂದು ತಲೆ ಕರೆದುಕೊಳ್ಳಬೇಕಾಗುತ್ತದೆ.

ಹಿಂದಿನ ಕಾಲದಲ್ಲಿ ಅಂದರೆ 1925 ರ ಸುಮಾರಿಗೆ ನಡೆಯುತ್ತಿದ್ದ ಸಣ್ಣಕಥೆಗಳ ಸ್ವರ್ಣಯುಗದಲ್ಲಿ ನಮ್ಮ ಕನ್ನಡಿಗರಿಗಂತೂ ಇದೊಂದು ದೊಡ್ಡ ಸಮಸ್ಯೆಯೆಂದು ತೊರಲಿಲ್ಲ. ಲೇಖನಿ ಹಿಡಿದು ಮೇಜಿನ ಮುಂದೆ ಕುಳಿರೆ ಸಾಕು ವಾರದ ಹುಡುಗ ಅಥವಾ ಭಿಕ್ಷಾನ್ನದ ಹುಡುಗನ ಚಿತ್ರ ಅನಾಯಾಸವಾಗಿ ಕಣ್ಣೆದುರಿಗೆ ಮೂಡುತಿತ್ತು. ಕಥೆಗಾರನಿಗೆ ಇಂಥ ವಸ್ತುವಿನ ವಿಷಯದಲ್ಲಿ ಉತ್ಸಾಹವಿದ್ದ ದ್ದರಿಂದ ಕಥೆಗೆ ಕಳೆ ಬಂತು ಓದು ಗನಿಗೂ ಆಸಕ್ತಿ ಬಂತು ಆದರೆ ಈ ಪರಿಸ್ಥಿತಿ ಬಹುಕಾಲ ನಡೆಯಲಿಲ್ಲ ಇತ್ತ ಓದುಗರೂ ಹಿಂದಿನಂತೆಯೋ ಹೇಳಿದ್ದಷ್ಟನ್ನು ನಂಬದೇ " ಆ ಗಂಡ ಹೆಂಡತಿ ನಿಜವಾಗಿಯೂ ನೂರು ಕಾಲ ಸುಖವಾಗಿ ಬಾಳಿದರೇ" ಒಬ್ಬರೊನ್ನಬ್ಬರು ಜಗಳ ಆಡಲೇ ಇಲ್ಲವೇ ? ಎಂದು ಮುಂತಾಗಿ ಪ್ರಶ್ನೇ ಹಾಕಲಾರಂಭಿಸಿದರು. ಆಗ ಬಿಕ್ಷಾನ್ನದ ಹುಡುಗ ಮಾಯಾವಾಗಿ ಗಾಯಕರು ಚಿತ್ರಕಾರರು ಶಿಲ್ಪಗಳು ನಟರು ಮುಂತಾದವರ ವಿಷಯ ಕುರಿತು ಬರೆಯಲಾರಂಭಿಸಿದರು ಆದ್ದರಿಂದ ಸಣ್ಣ ಕಥೆಯ ಸಮಸ್ಯೆಯೆಂದರೆ ಹೇಗೆ ಎಂಬುದು ಈ ಸಮಸ್ಯೆಗೆ ನನ್ನ ಉತ್ತರ ಕುದುರಿಸಬೇಕೆಂದು ನಿಯಮವೇನಿದೆ. ? ಸುಮ್ಮನಿರುವುದೇ ಮೇಲು ಸಣ್ಣಕಥೆಗೆ ವಯಸ್ಸಾಗಿದೆ. ತಲೆ ನರೆತಿದೆ. ದೇಹ ಸುಕ್ಕುಗಟ್ಟಿದೆ.

ಯಮಧರ್ಮರಾಯನಿಗೆ ಸಿದ್ಧವಾಗಿರುವ ಕವಳವನ್ನು ತಪ್ಪಿಸುವುದಕ್ಕೆ ನಾವು ಯಾರು ! ಇಷ್ಟಕ್ಕೂ ಪುನರ್ಜನ್ಮದಲ್ಲಿ ನಂಬಿಕೆಯಿಡುವ ನಾವು ಅವರ ಸಾವಿಗೆ ಹೆದರಬೇಕಾದ ಕಾರಣವಿಲ್ಲ ಆದ್ದರಿಂದ ಸಣ್ಣಕಥೆಗೆ ಹೇಳೋಣ " ಇನ್ನು ಹೊರಡು " ಎಂದು ಆದರೇ ಮರುಕ್ಷಣವೇ ಸಭ್ಯಮರ್ಯದೆಯನ್ನು ನೆನಪಿಗೆ ತಂದುಕೊಂಡು " ಹೋಗಿ ಬರುತ್ತಿಯಾ"? ಎಂದು ಕೇಳೋಣ ಎನ್ನುತ್ತಾರೆ.

ಕನ್ನಡ ಸಾಹಿತ್ಯದಲ್ಲಿ ಸಣ್ಣ ಕಥೆಗಳನ್ನು ಕೃಷಿ ಮಾಡಿದ ಶಿವರಾಮಕಾರಂತರು ಮಾಸ್ತಿಯವರು. ಕುವೆಂಪು. ಗೋಪಾಲಕೃಷ್ಣ ಅಡಿಗರು. ಅ.ನ.ಕೃ. ಕಟ್ಟಿಮನಿ. ತ.ರಾ.ಸು ರವರನ್ನು ಸ್ಮರಿಸಿದ್ದಾರೆ.

<u>ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು</u> :

ಈ ಪ್ರಬಂಧದ ವಸ್ತು ಗುಡಿಸಲು " ಗುಡಿಸಲು " ಎಂಬುದು ಮನೆ ಕಟ್ಟುವುದಕ್ಕಿಂತ ಮುಂಚೆ ತಮ್ಮ ಭಾವೀ ಮನೆಯನ್ನು ಎಲ್ಲರೂ ಕರೆಯುವ ಪದವೆಂದು ಲೇಖಕರು ಹೇಳುತ್ತಾರೆ ನಗರಸಭೆಯವರು ಎತ್ತರವಾದ ಪ್ರದೇಶದಲ್ಲಿ ಸಮತಟ್ಟಾದ ಸ್ಥಳವನ್ನು ಹುಡುಕಿ

ನಿವೇಶನಗಳನ್ನು ಕೊಡುತ್ತಾರೆ. ಲೇಖಕರುಗೆ ದೊರೆತ ವಿವೇಸನದಲ್ಲಿ ನಿಂತರೆ ಮೇಲುಕೋಟೆಯ ಬೆಟ್ಟ ಹಿರೋಡೆಯ ಬೆಟ್ಟ ಮತ್ತೊಂದು ಕಡೆ ಚಾಮುಂಡಿಯ ಬೆಟ್ಟ ಅದು ಊರಿಗೆ ದೂರವಾದ್ದರಿಂದ ಜನರ ಗಲಭೆಯೂ ಇರಲಿಲ್ಲ ಒಂದು ಕಡೆ ನಗರದ ಸೌಲಭ್ಯಗಳು ಮತ್ತೋಂದು ಕಡೆ ಹಳ್ಳಿಯ ಪ್ರಕೃತಿ ರಮ್ಯವಾದ ವಾತಾವಾರಣ ಇಂತಹ ಜಾಗದಲ್ಲಿ ನಿವೇಶನ ಸಿಕ್ಕಿದ್ದರಿಂದ ಲೇಕಕರು ಮನೆಕಟ್ಟಲು ನಿಶ್ಚಯಿಸುತ್ತಾರೆ. ನಿವೇಶನ ಸಿಕ್ಕ ಮೇಲೆ ಲೇಖಕರು ಮನೆಕೆಲಸವನ್ನು ಪ್ರಾರಂಭಿಸುತ್ತಾರೆ. ಕಿಟಕಿಗಳು ದೊಡ್ಡವಾಗಿ ಮನೆಯಲ್ಲಿ ಚೆನ್ನಾಗಿ ಗಾಳಿ ಬೆಳಕು ಆಡುವಂತಿರಬೇಕು. ತಾರಸಿಯೋ ಆಗಬೇಕು ಈ ಎಲ್ಲಾ ಕನಸುಗಳು ನನಸಾಗುವ ಜೊತೆಗೆ ಹತ್ತು ಸಾವಿರ ಸಾಲ ಮಾಡಿಯೂ ಆಯಿತು ಕೊನೆಗೆ ಮಾಡಿದ ಸಾಲ ತೀರಿಸಲಾಗದೆ ಮನೆಯನ್ನು ಮಾರಲು ನಿರ್ಧರಿಸಿದ್ದರು " ಮನೆಯೊಂದರೆ ಕೇವಲ ಇಟ್ಟಿಗೆ ಗಾರೆ ಅಲ್ಲ ಅದು ಮಹಾಲಕ್ಷ್ಮಿ ಎಂದು ಅವರ ಹೆಂಡತಿ ಲಲಿತೆ ಮಾರಲ ಬಿಡಲಿಲ್ಲ ಇದು ಎಲ್ಲರ ಮನೆಯಲ್ಲು ಇರುವ ಕಷ್ಟವೇ ಆಗಿದೆ. ಆದ್ದರಿಂದ ಲೇಖಕರುಗೆ ಜ್ಞಾನೊದಯವಾಗಿ ಮನೆ ಕಟ್ಟುವುದು ಒಂದು ದೃಷ್ಟಿಯಿಂದ ಮೂರ್ಖತನವೆನ್ನಬಹುದು ಕಟ್ಟಿದವನಿಗೆ ಕಷ್ಟ ತಪ್ಪಿದಲ್ಲ ಆದರೆ " ಕಷ್ಟವನ್ನು ನಾವು ಅನುಭವಿಸುತ್ತೇವೆ ಇತರರಿಗಾದರೂ ಅದರಿಂದ ಸುಖವಾಗಲಿ ಎನ್ನುವ ನಮ್ಮ ಸಾಹಸಿಗಳಿಗೆ ಕೃತಜ್ಞತೆ ಸಲ್ಲಿಸಲೇಬೇಕು ಆದ್ದರಿಂದ ನಾನು ಯೂರನ್ನು " ಮನೆ ಕಟ್ಟಿ ನೋಡು ಎಂದು ಮೂದಲಿಸುವಿದಿಲ್ಲ ಬದಲಾಗಿ " ನಿಲ್ಲುವುದಕ್ಕ ನೆರಳಾಗಿ ಸಣ್ಣದೊಂದು ಗುಡಿಸಲು ಕಟ್ಟಿಯೊಬಿಡಿ ಎಂದು ಉತ್ತೇಜನ ಕೊಡುವುದಾಗಿ ಹೇಳುತ್ತಾರೆ.

<u>ಅಕ್ಕಿಹೆಬ್ಬಾಳು</u> :

ಈ ಪ್ರಬಂಧದ ವಸ್ತು ಅಕ್ಕಿಹೆಬ್ಬಾಳು ಲೇಖಕರು ಬಾಲ್ಯವನ್ನು ಅಕ್ಕಿಹೆಬ್ಬಾಳಿನಲ್ಲಿ ಕಳೆದಿರುತ್ತಾರೆ. ಅನಂತರ ಮೈಸೂರಿನಲ್ಲಿ ನೆಲೆಸಿದ್ದ ಲೇಖಕರು ಎಷ್ಟೊ ದಿನಗಳ ನಂತರ ಬಂದಾಗ ಕಣ್ಣಿಗೆ ಹಳೆಯ ಅಕ್ಕಿಹೆಬ್ಬಾಳು ಹೋಗಿ ಹೊಸ ಅಕ್ಕಿಹೆಬ್ಬಾಳಾಗಿ ಕಾಣುತ್ತದೆ. ಹಿಂದಿನ ಆ ಚಚ್ಚೌಕಾರದ ನಾಲ್ಕ ಬೀದಿಗಳ ಹಳ್ಳಿಯಲ್ಲಿ? ಊರಿನ ಚಾವಡಿ ಹನುಮಂತರಾಯನ ಗುಡಿ ಅಲ್ಲಲ್ಲಿಯೊ ಬೆಳೆದಿದ್ದ ತೆಂಗಿನ ಮರಗಳು ಸಿಹಿನೀರಿನ ಬಾವಿ ಬಿಂದಿಗೆಗಳು ನೀರೆಳೆಯುವ ಹೆಂಗಸರು ಮನೆಗಳ ಮುಂದಿನ ರಂಗವಲ್ಲಿ ಎಲ್ಲಕ್ಕಿಂತಲೂ ಹೆಚ್ಚಾಗಿ ದೇವಾಲಯದ ಗೋಪುರ ಇವೆಲ್ಲವೂ ಕಾಣದೇ ಇದು ಹೇಗೆ ನಮ್ಮ ಊರಾದೀತು? ಎಂಬ ಭಾವನೆ ಲೇಖಕರು ಮೂಡುತ್ತದೆ. ಕಾರಣ ಹಳೆಯ ಊರಿನಲ್ಲಿ ಕಾಲರಾ ಪ್ಲೇಗು ಮಲೇರಿಯಾ ಮುಂತಾದ ರೋಗಗಳು ಹರಡಿ ಹಲವಾರು ಜನರು ತೀರುಕೊಂಡಿದ್ದಕ್ಕಾಗಿ ಊರನ್ನು ಬಾರೆಯ ಮೇಲುಗಡೆಗೆ ವರ್ಗಾಯಿಸಲಾಗಿ ಲೇಖಕರುಗೆ ಒಂದು ರೀತಿ ಹೊಸದಾಗಿ ಕಂಡಿದ್ದಕ್ಕೆ ಅನುಮಾನವಿಲ್ಲ. ಹಿಂದೆ. ತಮ್ಮ ಬಂಧುಗಳ ಮನೆಯಲ್ಲಿ ಅದಿಗೆ

ಮನೆಗೆ ನುಗ್ಗಿ ಕೈ ತುತ್ತು ತಿನ್ನುತ್ತಿದ್ದ ಲೇಖಕರು ಇಂದು " ಮನೆಯ ಅತಿಥಿ" ಯಾಗಿದ್ದರು ಬಾಳೆ ಎಲೆ ತರಿಸಿ ಹಪ್ಪಳ ಸಂಡಿಗೆ ಸುಟ್ಟು ಊಟಕ್ಕೆ ಕರೆಯುತ್ತಾರೆ. ಇದ್ದರಿಂದಾಗಿ ಲೇಖಕರು ತಾವು ಹೊರಗಿನವರಾಗಿ ಹೋದೆನೇನೋ ಎಂಬ ಕೊರಗು. ಅಕ್ಕಿಹೆಬ್ಬಾಳಿನಲ್ಲಿ ಹಲವಾರು ಜಾತಿ ಮತಗಳಿದ್ದು ಎಲ್ಲರೂ ಸಹೋದರಂತೆ ಇರುತ್ತಿದ್ದರು. ಮಾರನೆಯ ದಿನ ಮೈಸೂರಿಗೆ ಹೊರಟ ಲೇಖಕರಿಗೆ ದೇವಸ್ಥಾನ ನೆನಪಿಗೆ ಬರುತ್ತದೆ. ಅದರ ಬಗ್ಗೆ ಹೇಳುತ್ಆ ನಮ್ಮೂರಿನ ದೇವರು ನರಸಿಂಹ ಉಗ್ರನರಸಿಂಹನಲ್ಲ ಅರ್ಥಾತ್ ಲಕ್ಷೀನರಸಿಂಹ. ಶಾಂತಸ್ವರೂಪಿಯಾದ ನರಸಿಂಹು ಅಕ್ಕಿಹೆಬ್ಬಾಳಿಗೆ ತನ್ನ ರಕ್ಷಣೆಯನ್ನು ನೀಡಿದ್ದನು ವರ್ಷಕ್ಕೊಂದು ಸಲ ಲಕ್ಷ್ಮೀನರಸಿಂಹನ ರಥೋತ್ಸವ ನಡೆಯುತ್ತಿತ್ತು ಬ್ರಾಹ್ಮಣರು ಅಬ್ರಾಹ್ಮಣರು ಹಿಂದುಗಳು ಮುಸಲ್ಮಾನರು ಎಲ್ಲರೂ ಸೇರಿ ಹಬ್ಬ ಮಾಡುತ್ತಿದ್ದರು. ರಥೋತ್ಸವದ ಸಂದರ್ಭದಲ್ಲಿ ನಡೆಯುತ್ತಿದ್ದ ಪೂಜಾ ಕಾರ್ಯಕ್ರಮಗಳು ಬಾಳೆಹಣ್ಣು ದವನ ಹಿಡಿದು ಭಟ್ಟರಿಗೆ ಗುರಿಯಿಟ್ಟು ಹೊಡೆಯುತ್ತಿದ್ದುದೆಲ್ಲಾ ನೆನಪಿಗೆ ಬರುತ್ತಿದ್ದವು.

ಅಕ್ಕಿಹೆಬ್ಬಾಳಿನಲ್ಲಿ ಕೃಷ್ಣಭಟ್ಟ ಎಂಬುವವನಿಗೆ ಭಾರಿ ಮೋಸ ಮಾಡಿದ .ಫಲವಾಗಿ ಆತ ಹೊಳೆಯಲ್ಲಿ ಬಿದ್ದು ಸತ್ತ ಕಥೆಯನ್ನು ಈಗಲೂ ಹೇಳುತ್ತಾರೆ. ಬಿದ್ದ ಸ್ಥಳಕ್ಕೆ ಕೃಷ್ಣಭಟ್ಟನ ಮಡು ಎಂದು ಈಗಲೂ ಹೆಸರಿದೆ. ಇನ್ನು ಊರಿನ ಜಿವನವೆಲ್ಲಾ ಒಂದು ಮನೆಯ ಜೀವನದಂತೆ ಸಾಗುತ್ತಿತ್ತು. ಒಂದು ಮನೆಯಲ್ಲಿ ಮದುವೆಯಾದರೇ ಹಪ್ಪಳ ಸಿದ್ದಪಡಿಸುವುದಕ್ಕೆ ಊರಿನ ಎಲ್ಲಾ ಮನೆಗಳಲ್ಲೂ ಕೆಲಸ ನಡೆಯುತ್ತಿತ್ತು ನೀರೋದಗಿಸಲು ಹತ್ತು ಮನೆಯ ಗಾಡಿಗಳು ಹಂಡೆಗಳನ್ನು ಹೇರಿಕೊಂಡು ಹೊಳಗೆ ಹೋಗುತ್ತಿದ್ದವು ಎಲೆ ಹಾಕಿ ಬಡಿಸುವುದಕ್ಕೆ ಎಲ್ಲರ ಮನೆಯ ಯುವಕರೂ ನಿಲ್ಲುತ್ತದ್ದರು ಹೀಗೆ ಅಕ್ಕಿಹೆಬ್ಬಾಳಿನಲ್ಲಿ ಎಲ್ಲರಲ್ಲೂ ಸಹಕಾರ ಮನೋಭಾವ ಇತ್ತು.

ಊರಿನಿಂದ ಅರ್ಧಮೈಲಿ ದೂರದಲ್ಲಿ ಹೇಮಾವತಿ ನದಿ ಇತ್ತು. ಇದು ಸುತ್ತಮುತ್ತಲಿನ ಜನಕ್ಕೆ ಅನ್ನದಾತೆಯಾಗಿತ್ತು. ಲೇಖಕರು ಈ ನದಿಗೆ ಹೋಗಿ ಕೊಪ್ಪರಿಗೆ ಮಡುವಿನಲ್ಲಿ ಕೈಕಾಲು ದಣಿಯುವವರೆಗೆ ಈಜುತ್ತಾರೆ. ನೀರಿನೆಂದೆದ್ದು ಹೊಂಗೆಯ ನೆರಳಲ್ಲಿ ನಿಂತು ಮೈಯೊರೆಸಿಕೊಳ್ಳುತ್ತದ್ದ ಲೇಖಕರನ್ನು ಕಲ್ಯಾಣಿ ದಾಸನೆಂಬುವವನು ಮಾತನಾಡಿಸುತ್ತಾನೆ ತಮ್ಮ ಹಳೆಯ ನೆನಪುಗಳು ಮತ್ತೆ ಗರಿಬಿಚ್ಚುತ್ತವೆ. ಆ ಮೂಲಕ ಅಕ್ಕಿಹೆಬ್ಬಾಳು ಲೇಖಕರಿಗೆ ಮತ್ತೆ ಪ್ರಾಯವಾಗುತ್ತದೆ. ಮೂರು ದಶಕಗಳಿಂದ ನಾನು ಶೇಖರಿಸಿ ಇಟ್ಟಿದ್ದ ನೆನಪಿನ ಸಂಪತ್ತು ವಾಸ್ತವಿಕತೆ ಬೆಂಕಿಯಲ್ಲಿ ಸುಟ್ಟು ಹೋಗದೇ ಉಳಿದುಕೊಂಡಿತು ಎಂದು ಹೇಳಿದ್ದಾರೆ.

ಮಿನುಗು ಮಿಂಚು" ಲಲಿತ ಪ್ರಬಂಧಗಳಲ್ಲಿ ವಸ್ತುವೈವಿಧ್ಯ

1. ಹರಟೆಯ ಮಲ್ಲ
2. ಹರಟೆ ಮತ್ತು ಪ್ರಭಂಧ
3. ದೆವ್ವಗಳನ್ನು ಕುರಿತು
4. ಗೊಣಗುವ ಚಟ
5. ಬೇಡದ ಅತಿಥಿಗಳು
6. ಬೆಂಗಳೂರು
7. ಗಾಂಪರೊಡೆಯರ ಸಂಘ _ ವಿಧಾನಸಭೆಯಲ್ಲಿ
8. ಡಾಕ್ಟರ್ ವಿಶ್ವೇಶ್ವರಯ್ಯ – ವ್ಯಕ್ತಿ ಮತ್ತು ಐತಿಹ್ಯ
9. ಗಾನ ಪ್ರಪಂಚದ ಅಪೂರ್ಣಪ್ರಜ್ಞರು
10. ಸಂಸ್ಕೃತಿ ಮತ್ತು ಸಾಹಿತ್ಯ
11. ರೇಡಿಯೋ ನಾಟಕ ಮತ್ತು ರಂಗಭೂಮಿ ನಾಟಕ
12. ತೆರೆದ ಮನ
14. ನೀಳಕಂಠ

ಮಿನುಗು ಮಿಂಚು ಲಲಿತ ಪ್ರಬಂಧವು ಮೊದಲಿಗೆ 1962 ರಲ್ಲಿ ಪ್ರಕಟವಾಯಿತು ಎರಡನೆಯ ಮುದ್ರಣ 1967 ಮೂರನೆಯ ಮುದ್ರಣ 1968 ನಾಲ್ಕನೆಯದು 1970 ಐದನೆಯದು 1972 ಆರನೆಯಮುದ್ರಣ 2000 ಇಸವಿಯಲ್ಲಿ ಪ್ರಕಟವಾಯಿತು ಎಂದು ತಿಳಿಯಬಹುದು. ಈ ಪ್ರಬಂಧವು ಸುಂದರ ಬರಹಗಳ ಮೂಲಕ ಎಲ್ಲರನ್ನು ಆಕರ್ಷಿಸುತ್ತದೆ. ಇದರಲ್ಲಿ ಒಟ್ಟು ಹದಿಮೂರು ಪ್ರಬಂಧಗಳು ಇರುವುದನ್ನು ಕಾಣಬಹುದು

ಲೇಖಕರು ಈ ಪ್ರಬಂಧದಲ್ಲಿಯು ತನ್ನು ಚಾಕಚಕ್ಯತೆಯನ್ನು ಮೆರೆದಿದ್ದಾರೆ ಎಂದು ತಿಳಿಯಬಹುದು ಲೇಖಕರು ಹರಟೆ ಮತ್ತು ಪ್ರಬಂಧವು ಯಾವ ರೀತಿ ವ್ಯತ್ಯಾಸ ಕಾಣಬಹುದು ಚರ್ಚಿಸಿದ್ದಾರೆ. ದೆವ್ವಗಳ ಬಗ್ಗೆ ತಮ್ಮ ವೈಚಾರಿಕ ನಿಲುವನ್ನು ತೋರಿಸಿರುವುದು ಬೆಂಗಳೂರು ನಗರದ ಬಗ್ಗೆ ಇವರ ಸ್ವತಃ ಅನುಭವಗಳ ಧಾರೆಯನ್ನು ಬರಹದ ಮೂಲಕ ಹಂಚಿಕೊಂಡಿರುವು ಡಾ॥ವಿಶ್ವೇಶ್ವರಯ್ಯನವರ ವ್ಯಕ್ತಿತ್ವದ ಚಿತ್ರಣವನ್ನು ಮಿತ್ರರಿಂದ ಕೇಳಿ ಬರೆದಿರುವುದು. ಸಂಸ್ಕೃತಿ ಮತ್ತು ಸಾಹಿತ್ಯವು ಯಾವ ರೀತಿ ಕವಲೊಡೆದು ಎರಡು ಎಷ್ಟೊಂದು ಮಹತ್ವವುಳ್ಳವು ಎಂದು ತಿಳಿಸಿರುವುದಾಗಿದೆ.ಲೇಖಕರು ರೇಡಿಯೋ ನಾಟಕ ಮತ್ತು ರಂಗಭೂಮಿಯ ನಾಟಕದ ವಿಶೇಷತೆಯನ್ನು ಯಾವ ರೀತಿ ಬರೆಯಲಾಗಿದೆ ಎಂದು ತಿಳಿಯಬಹುದು

ಒಟ್ಟಾರೆಯಾಗಿ ಲೇಖಕರು " ಮಿನುಗುಮಿಂಚು" ಎಂಬ ರಚನೆಯಲ್ಲಿ ಎಲ್ಲ ನಿಬಂಧಗಳನ್ನು ಅತ್ಯಂತ ಸೊಬಗನ್ನು ಕಂಡವು ಎಂಬಂತೆ ಬರೆದಿರುವುದಾಗಿ ಕಾಣಬಹುದು ಮಿನುಗುಮಿಂಚು ಪ್ರಬಂಧವು ಲೇಖಕರು ಬರೆದಿರುವ ಅತ್ಯಂತ ಹೆಚ್ಚಿನ ರೀತಿಯಲಿ ವರ್ಣನೆಯನ್ನು ಗಳಿಸಿಕೊಡಲು ಸಹಕಾರಿಯನ್ನು ಮಾಡಿತು ಎನ್ನಲಾಗಿದೆ.

<u>ಹರಟೆಯ ಮಲ್ಲ</u> :

ಈ ಪ್ರಬಂಧದ ವಸ್ತು ಹರಟೆಯ ಮಲ್ಲ, ಪ್ರಬಂಧದಲ್ಲಿ ಹರಟೆಯ ಕುರಿತು ವಿಶ್ಲೇಷಣೆ ಮಾಡುತ್ತಾರೆ ಹರಟೆಗೆ ಇಂಗ್ಲೀಷನಲ್ಲಿ 'ಬೋರ್' ಎಂದು ಕರೆಯುತ್ತಾರೆ, ನಿಘಂಟುಕಾರ ಅದಕ್ಕೆ ಹರಟೆಯ ಮಲ್ಲ ಎಂಬ ಅರ್ಥವನ್ನು ಕೊಡುತ್ತಾನೆ, ಇದು ಲೇಖಕರಿಗೆ ಅಸಮಧಾನದ ವಿಷಯ, ಎಕೆಂದರೆ ಅವರ ಮಿತ್ರರು ಅವರಿಗೆ ಹರಟೆಯ ಮಲ್ಲ ಎಂಬ ಬಿರುದನ್ನು ಕೊಟ್ಟಿದ್ದರು. ಆದರೆ 'ಬೋರ್' ಎಂಬ ಪದಕ್ಕೆ 'ಹರಟೆಯ ಮಲ್ಲ' ಎಂದು ಅರ್ಥ ಕೊಡುವುದು ತಪ್ಪು ಎಂದು ಲೇಖಕರು ಅಭಿಪ್ರಾಯ , ಪಾಶ್ಚಾತರಲ್ಲಿ 'ಕ್ಲಬ್ ಬೋರ್' ಎಂಬ ವ್ಯಕ್ತಿಯೊಬ್ಬ ಇರುತ್ತಾನೆ, ಕ್ಲಬ್ಬಿನ ಒಂದು ಭಾಗ ಅವನಿಗೆ ಮೀಸಲಾಗಿರುತ್ತದೆ ! ಇತರರೂ ಯಾರು ಸ್ವಂತ ಇಚ್ಛೆಯಿಂದ ಅಲ್ಲಿಗೆ ಹೋಗೆ ಕುಳಿತುಕೊಳ್ಳುವ ಪ್ರಯತ್ನ ಮಾಡುವುದಿಲ್ಲ. ದೂರದಿಂದಲೇ ಅವನಿಗೆ ನಮಸ್ಕಾರ ಮಾಡಿ ಏನೋ ಆತುರದ ಕೆಲಸ ಮಾಡುವವರಂತೆ ಬೇರೊಂದು ಕಡೆಗೆ ಹೊರಟು ಹೋಗುತ್ತಾರೆ. ಅವನ ಹೆಸರು ಕೇಳಿದರೆ ನಡುಗುತ್ತಾರೆ. ಇದಕ್ಕೆ ಸಾಕಷ್ಟು ಕಾರಣವಿದೆ. ಬೈರಿಗೆಯವನು ಮೇಲುನೋಟಕ್ಕೆ ನಮ್ಮೆಲ್ಲರಂತೆಯೇ ಕಂಡರೂ ಅವನ ಮನಸ್ಸು ಇಂದ್ರಿಯಗಳೂ ವರ್ತಿಸುವ ರೀತಿಯೇ ಬೇರೆ . ಅವನ ಕಣ್ಣುಗಳು ತಮ್ಮ ಬೇಟೆಯನ್ನು ಗುರುತಿಸಿ ಬೆನ್ನಟ್ಟಿ ಹಿಡಿಯುವವರೆಗೆ ಕೆಲಸ ಮಾಡುತ್ತಿರುವೆ ಬೈರಿಗೆಯವನ ಮಾತು ಗೋರ್ಕಲ್ಲ ಮೇಲೆ ಮಳೆಗರೆದಂತೆ

ಮುಂದೆ ಭೈರಿಗೆಯವನಿಗೂ ಹರಟೆಯ ಮಲ್ಲನಿಗೂ ಇರುವ ವ್ಯತ್ಯಾಸವನ್ನು ಹೇಳುತ್ತಾ ಹೋಗುತ್ತಾರೆ. ಭೈರಿಗೆಯವರಿಗೆ ಬೇಕಾದ ಜನ ಶತ್ರುಗಳು : ಹರಟೆ ಮಲ್ಲನಿಗೆ ಬೇಕಾದವರು ಇತರೆ ಹರಟೆಮಲ್ಲರು , ತನ್ನಂತೆಯೇ ವಾಚಾಳಿಗಳಾದ ಮಿತ್ರರು. ಭೈರಿಗೆಯವನ ಮಾತು ಗೋರ್ಕಲ್ಲ ಮೇಲೆ ಕರೆದ ಮಳೆಯಾದರೆ, ಹರಟೆ ಯೌವನದಿಂದ ತುಂಬಿತುಳುಕುವ ಮುಗ್ಧೆಯ ಕಣ್ಣುಗಳಂತೆ , ಅದರ ಚಾರಿಚಲ್ಯವೇ ಸೊಬಗು, ಎಂದು ಹರಟೆಯನ್ನ ವರ್ಣಿಸುತ್ತಾರೆ. ಮೇಲುನೋಟಕ್ಕೆ ಹರಟೆ ಅಪ್ರಯೋಜಕ ಎಂದು ತೋರುತ್ತದೆ. ಆದರೆ ಆಗತಾನೆ ಭಿತ್ತಿದ ಹೊಲದಲ್ಲಿ ಪೈರು ಕಾಣಿಸಿಕೊಳ್ಳವುದಾದರೂ ಹೇಗೆ ? ಹರಟೆಯ ಮನಸ್ಸು ಫಲವತ್ತಾದ ಕ್ಷೇತ್ರ, ಆಗ ಸುಳಿದು ಮಾಯವಾದಂತೆ ತೋರುವ ನೂರೆಂಟು ವಿಚಾರಗಳು ಒಂದಲ್ಲಿ ಒಂದು ದಿನ ಮೊಳೆತು, ಚಿಗುರಿ ಹೂವು ಹಣ್ಣುಗಳನ್ನು ಕೊಡುತ್ತದೆಂದು ಹರಟೆಯನ್ನು ಹೊಗಳಿದ್ದಾರೆ.

**<u>ಹರಟೆ ಮತ್ತು ಪ್ರಬಂಧ</u> :**

ಹರಟೆ ಮತ್ತು ಪ್ರಬಂಧ ಈ ಎರಡೂ ಪ್ರಬಂಧದ ನಡುವೆ ಇರುವ ವ್ಯತ್ಯಾಸವನ್ನು ಹೋಲಿಕೆ ಮಾಡಿ ನೋಡಿದ್ದಾರೆ, 'ಹರಟೆ' ಎಂಬ ಪದವನ್ನು ನಮ್ಮಲ್ಲಿ ಇಂಗ್ಲೀಷಿನ 'ಎಸ್ಸೆ' (ಇಛಿಥಿ) ಗೆ ಪರ್ಯಾಯ ಪದವಾಗಿ ಬಳಸುವುದುಂಟು, ಈ ಪ್ರಯೋಗ ಅಷ್ಟು ಸಾಧುವೂ ಅಲ್ಲ. ಹರಟೆಗೆ ಆರಂಭವುಂಟೇ ಹೊರತು ಅಂತ್ಯವೂ ಇಲ್ಲ. ಕೇಂದ್ರವೂ ಇಲ್ಲ. ಅದರ ಲಕ್ಷಣ ಅನಿಶ್ಚಿತ ಗತಿ. ಅದರಿಂದ ಬರುವ ಫಲ ಅನಿರೀಕ್ಷಿತ ಫಲ. ಆದರೆ ಲಲಿತ ಪ್ರಭಂಧಗಳಿಗೆ ಆದಿ. ಅಂತ್ಯ ಕೇಂದ್ರಗಳೆಲ್ಲವೂ ಉಂಟು. ಪ್ರಬಂಧಕಾರನ ವ್ಯಕ್ತಿತ್ವವೇ ಅದರ ಕೇಂದ್ರ; ಪ್ರಬಂಧವೆಲ್ಲಾ ಆ ಕೇಂದ್ರದ ಸುತ್ತ ಬೆಳೆಯುತ್ತದೆ. ಆದ್ದರಿಂದ 'ಎಸ್ಸೆ' ಎಂಬ ಪದ ಪ್ರಬಂಧಕ್ಕೆ ಒಪ್ಪಿಗೆಯಾಗುತ್ತದೆಂದು ಹೇಳುತ್ತಾರೆ. ಹರಟೆಯಲ್ಲಿ ಯಾರೊಬ್ಬನ ವ್ಯಕ್ತಿತ್ವದ ಅಲ್ಲಿ ವ್ಯಕ್ತಿತ್ವ ಪ್ರದರ್ಶನಕ್ಕೆ ಅವಕಾಶವಿರುವುದಿಲ್ಲ. ಇಲ್ಲಿ ಲೇಖಕರು ಹರಟೆಯನ್ನು ಕುರಿತ ಆಟಗಾರರ ಕಾಲ್ಚೆಂಡಾಲಕ್ಕೆ ಹೋಲಿಸಿ ನೇಡುತಾರೆ. ಎಂಥ ಚುರುಕನಾದ ಆಟಗಾರನೂ ಕೂಡ ಚೆಂಡನ್ನು ತಾನೊಬ್ಬನೇ . ಗೋಲಿನವರೆಗೂ ಸಾಗಿಸುವುದು ಕಷ್ಟ: ಹಾಗೆ ಹೊರಟರೆ ಆಟ ಕೆಟ್ಟುಹೋಗುತ್ತದೆ. ಚೆಂಡನ್ನು ಸಂದರ್ಭಕ್ಕೆ ಅನುಸಾರವಾಗಿ ಸಂಗಡಿಗರ ವಶಕ್ಕೆ ಒಪ್ಪಿಸಿ. ಅವರ ಆಟವನ್ನು ಗಮನಿಸುತ್ತಿದ್ದು ಚೆಂಡು ಮತ್ತೆ ತನ್ನ ವಶಕ್ಕೆ ಬರುವುದನ್ನು ಕಾದು ನೋಡುತ್ತಿರಬೇಕು, ಹಾಗೆಯೇ ನಾಲ್ವರು ಜನ ಸೇರಿ ಹರಟೆ ಹೊಡೆಯುವಲ್ಲಿ ಒಬ್ಬನ ಅಹಂಭಾವ ಹೆಚ್ಚಾದರೆ ಅವನು ಗುಂಪಿನಿಂದ ಹೊರಬೀಳುತ್ತಾನೆ. ಇಲ್ಲವೇ ಹರಟೆಯ ಸ್ವರೂಪಕ್ಕೆ ಲೋಪ ಬರುತ್ತದೆ. ಅಹಂಭಾ – ಹರಟೆಗಳೆರಡು ಅನ್ಯೋನ್ಯವಾಗಿ ಬೆಳೆಯಲಾರವು. ಪ್ರಬಂಧ ಅಹಂಭಾವ ಇಲ್ಲದೇ ಬೆಳೆಯಲಾರದು ಅದರಲ್ಲಿ ನಮಗೆ ಎದ್ದು ಕಾಣುವುದು ಅಹಂಭಾವದ ಸ್ವಾಭಾವಿಕವಾದ ವಿಕಾಸ. ಆದರೆ ಆ ಅಹಂಭಾವ ಇತರರಿಗೆ ಅಸಮಾಧಾನ ತರಬಾರದೆಂದು ಹೇಳುತ್ತಾರೆ.

ಹರಟೆಗೆ ಬಂಧದ ಅವಶ್ಯಕತೆ ಇಲ್ಲ. ಆದರೆ ಪ್ರಬಂಧಕ್ಕುಂಟು ಹರಟೆಗೆ ಗುರಿಯಿಲ್ಲ ಅದರಿಂದ ಬರುವ ಫಲ ಅನಿರೀಕ್ಷಿತವಾದದ್ದು. ಪ್ರಬಂಧಕ್ಕೆ ಗುರಿಯುಂಟು: ಅದು ಬಾವ ಪ್ರವಾಹದಲ್ಲಿ ಹೊರಟು ಬಂದು ದಡವನ್ನು ಸೇರಬೇಕು. ಅದರಿಂದ ಬರುವ ಫಲ ನಿರೀಕ್ಷಿತ ಫಲ ಎಂದು ಹೇಳುತ್ತಾರೆ. ಹೀಗೆ ಲೇಖಕರು ಹರಟೆ ಮತ್ತು ಪ್ರಬಾಧಕ್ಕೂ ತಮ್ಮ ನಿಲುವುಗಳನ್ನು ಹೇಳಿರುವರು.

**<u>ದೆವ್ವಗಳನ್ನು ಕುರಿತು:</u>**

ಈ ಪ್ರಬಂಧದ ವಸ್ತು ದೆವ್ವಗಳು ದೇವರು – ದೆವ್ವಗಳಲ್ಲಿ ನಂಬಿಕೆ ಇಲ್ಲದ ಲೇಖಕರು ದೆವ್ವಗಳನ್ನು ಕುರಿತು ಮಿತ್ರರಿಂದ ಕೇಳಿದ ಕಥೆಗಳು ತಮಗಾದ ಅನುಭವಗಳನ್ನು ಕುರಿತು ಇಲ್ಲಿ ಹೇಳಿದ್ದಾರೆ.

ದೆವ್ವಗಳಿವೆಯೆನ್ನುವುದಕ್ಕೆ ನನಗೆ ಯಾವ ಆಧಾರವು ದೊರೆತಿಲ್ಲ ಎನ್ನುವ ಲೇಖಕರು ದೊಡ್ಡಮನೆಗಳಲ್ಲಿ, ಊರಹೊರಗಿರುವ ಪ್ರವಾಸಿ ಮಂದಿರಗಳಲ್ಲಿ ಒಂಟಿಯಾಗಿ ರಾತ್ರಿಯನ್ನು ಕಳೆದಿದ್ದಾರೆ. ಅಮಾವಸ್ಸೆಯ ಕತ್ತಲಿನಲ್ಲಿ ಸ್ಮಶಾನಗಳಲ್ಲಿ, ಹುಣಸೆ ತೋಪುಗಳಲ್ಲಿ ತಿರುಗಾಡಿದ್ದರು ಲೇಖಕರ ಕಣ್ಣಿಗೆ ದೆವ್ವಗಳು ಬಿದ್ದಿಲ್ಲ, ಈ ಲೋಕದಲ್ಲಿ ಸತ್ತವರ ಸಂಖ್ಯೆ, ಎಣಿಸಲಾರದಷ್ಟು, ಅವರಲ್ಲಿ ಸಾವಿರಕ್ಕೆ ಒಂದರಷ್ಟು ಜನರು ದೆವ್ವವಾಗಿ, ಅವುಗಳಲ್ಲಿ ಯಾವುದಾದರೊಂದು ಅನಾಥ–ಪ್ರೇತ ನನಗೆ ಕುಶಲ ಪ್ರಶ್ನೆ ಕೇಳಬಾರದೆ.? ಎಂದು

ಹಾಸ್ಯ ಮಾಡುತ್ತಾರೆ. ಲೇಖಕರ ಮಿತ್ರರೊಬ್ಬರು ಅವರ ಸ್ವಾಭಿಮಾನವನ್ನು ಉಳಿಸುವಂಥ ಥಿಯರಿಯೊಂದನ್ನು ಗಮನಕ್ಕೆ ತರುತ್ತಾರೆ, ಮಾನವರಲ್ಲಿ ದೇವಗಣ, ರಾಕ್ಷಸಗಣ, ಎಂದು ಎರಡು ವರ್ಗಗಳಿವೆ, ದೆವ್ವ, ಭೂತಗಳು ಭೂತಗಣದವರಿಗೆ ಮಾತ್ರ ಕಾಣಿಸಿಕೊಳ್ಳುತ್ತವೆ: ದೇವಗಣದವರಿಗೆ ಕಾಣಿಸುವುದಿಲ್ಲ ಎಂದು, ಇದನ್ನು ಕೇಳಿದ ಲೇಖಕರು ಹೆಮ್ಮೆಯಿಂದ ಬೆನ್ನು ತಟ್ಟಿಕೊಳ್ಳುತ್ತಾರೆ, ದೆವ್ವಗಳಿಗೆ ನನ್ನ ಕಣ್ಣೆದುರಿಗೆ ಸುಳಿಯುವ ಧೈರ್ಯವಿಲ್ಲ ಎಂದು.

ದೆವ್ವಗಳ ಬುದ್ಧಿಗೆ ಅದೇನು ಮಂಕು ಬಡಿದಿದೆಯೋ ಅವು ಸತ್ತ ಕಡೆಯೇ ಬಿದ್ದು ಸಾಯುತ್ತವೆ. ಅನುಭವಿಸಿದ ಸಂಕಟವನ್ನೇ ಮತ್ತೆ ಅನುಭವಿಸುತ್ತವೆ. ಆ ಸಂಕಟವನ್ನು ನೆನಪಿಗೆ ತರುವ ಸ್ಥಳಗಳನ್ನು ಬಿಟ್ಟು ಬೇರೆ ಕಡೆ ಹೋಗಿ ಸುಖವಾಗಿರಬಾರದೇ? ಎಂದು ಹೇಳುತ್ತಾರೆ, ನ್ಯಾಯವಾಗಿ ನೋಡಿದರೆ ಮಾನವರಿಗಿಲ್ಲದ ಅದೃಶ್ಯ ಶಕ್ತಿಯನ್ನು ದೇವರು ದೆವ್ವಕ್ಕೆ ಕಲ್ಪಿಸಿಕೊಟ್ಟಿದ್ದಾನೆ, ಆದ್ದರಿಂದ ಅವು ಯಾವ ಅಡಚಣೆಯೂ ಇಲ್ಲದೇ ಎಲ್ಲಾದರೂ ಪ್ರಯಾಣ ಮಾಡಬಹುದು, " ಅವುಗಳೇನು ಪಾಸ್‌ಪೋರ್ಟ್ ಕಛೇರಿಗೆ ಅಲೆಯಬೇಕೆ, ಸುಂಕದ ಕಟ್ಟೆಗಳಲ್ಲಿ ಹೇಳಿಕೆ ಕೊಡಬೇಕೆ, ಟಿಕೇಟಿಗೆ ಹಣವಿಲ್ಲವೆಂದು ಚಿಂತೆಪಡಬೇಕೆ ? ಪ್ಲೇನು ದುರಂತಕ್ಕೀಡಾದೀತೆಂಬ ಭಯವೂ ಇಲ್ಲ, ಆದ್ದರಿಂದ ಅವು ಧಾರ್ಮಿಕ ಶ್ರದ್ಧೆಯುಳ್ಳಬಾವರೇ ಘಳಿಗೆಯಲ್ಲಿ ಕಾಶೀ ರಾಮೇಶ್ವರಗಳಿಗೆ ಯಾತ್ರೆ ಹೊರಡಬಹುದು , ರಸಿಕ ಅಥವಾ ಸಾಹಸಿ ದೆವ್ವಗಳಾದರೇ ಇಂದು ರಿವಿಯೇರಾ ನಾಳೆ ನಯಾಗರ ಜಲಪಾತ , ನಾಳಿದ್ದು ತಾಜ್‌ಮಹಲ್ ನೋಡಲು ಹೊರಡಬಹುದು , ಬೇಕೆಂದರೆ ಎವರೆಸ್ಟ್ ತುದಿಯಲ್ಲಿ ನಿಂತು ಆ ಶಿಖರವನ್ನೇರಲಾರದೆ ಸತ್ತವರ ಪ್ರೇತಗಳನ್ನು ಹಂಗಿಸಬಹುದೆಂದು ದೆವ್ವಗಳಿಗಿರುವ ಶಕ್ತಿ ಸಾಮರ್ಥ್ಯಗಳನ್ನು ಹೊಗಳಿದ್ದಾರೆ.

ಸಾಮಾನ್ಯವಾಗಿ ದೆವ್ವಗಳಿಗೆ ಯಾರನ್ನೂ ಕೊಲ್ಲುವ ಅಪೇಕ್ಷೆಯಿಲ್ಲ. ಕೊಲೆ ಮಾಡುವುದು ದೆವ್ವಗಳ ಕುಲಕ್ಕೆ ಅಪವಾದ , ಬದಲಾಗಿ ಮಾನವನಿಗೆ ಕಾಟಕೊಟ್ಟು ಅದರಿಂದ ಸಂತೋಷಪಡಬಹುದು, ಮಾತ್ರ ದೆವ್ವಗಳ ಕೆಲಸವೆಂದು ಅಭಿಪ್ರಾಯ ಪಡುತ್ತಾರೆ, ಒಮ್ಮೆ ಅವರ ಊರಿನಲ್ಲಿ ನಡೆದ ಕಥೆಯನ್ನು ಲೇಖಕರು ಹೇಳುತ್ತಾರೆ: ಗಂಡ ಹೆಂಡತಿಯರಿಬ್ಬರೇ ಇದ್ದ ಒಂದು ಪುಟ್ಟಸಂಸಾರ. ಆಕೆ ತುಂಬು ಗರ್ಭಿಣಿ. ನೆರೆಹೊರೆಯವರು ' ಎನೇ ಸರಸು' ಬಾಣಂತನದ ಸಮಯದಲ್ಲಿ ಕೈನೆರವಾಗಿ ಯಾರಾದರೂ ಇರಬೇಕಲ್ಲಮ್ಮ ' ಎಂದಾಗ ಅದಕ್ಕೆ ನಿರಾಶೆಯ ದನಿಯಲ್ಲಿ " ನನಗೆ ಯಾರು ದಿಕ್ಕು ಹೇಳು, ದೆವ್ವವೋ, ಪಿಶಾಚಿಯೋ ಸಹಾಯ ಮಾಡಬೇಕಷ್ಟೇ" ಎಂದಳು. ನೆರಮಾನೆಯಾಕೆ " ಹಾಗೆಲ್ಲ ಮಾತಡ ಬೇಡ ನನ್ನ ತಾಯಿ, ಇಂಥ ಮಾತಿಗೆಲ್ಲಾ ಪಿಶಾಚಿ ಅಸ್ತು ಅನ್ನುತ್ತದಂತೆ " ನಾವೆಲ್ಲಾ ಸಹಾಯಕ್ಕೆ ? ಎಂದಳು. ಮನೆಯಲ್ಲಿದ್ದ ದೆವ್ವಕ್ಕೆ ಈ ಮಾತು ಕೇಳಿಸಿ " ತಾಯಿ ನಿಮ್ಮ ಸಹಾಯಕ್ಕೆ ಯಾರು ಇಲ್ಲ ಎಂದು ಕೇಳಿದೆ, ನನಗೂ ಯಾರು ಗತಿಯಿಲ್ಲ, ನೀವು ಒಪ್ಪುವುದಾದರೇ ಎರಡು ಮೂರು ತಿಂಗಳು ಇಲ್ಲೇ ಇದ್ದು ಸೇವೆ ಮಾಡವೆ" ಎಂದು ಮುದುಕಿಯ ರೂಪದ ದೆವ್ವವೂ ಹೇಳಿತು. ಅದಕ್ಕೆ ಗರ್ಭಿಣಿ ಹೆಂಗಸು ಅದನ್ನು ಒಪ್ಪಿಕೊಳ್ಳುವರು. ನಂತರ ಮಗವೂ ಆಯಿತು. ಆ ಮುದುಕಿಯು ತಾಯಿ ಮಗುವಿಗೆ ಒಳ್ಳೆಯ ಉಪಚಾರ ಮಾಡುವಳು. ಆದರೆ ಒಂದು ಎಚ್ಚರಿಕೆ ಕೊಡುವಳು. ಯಾವುದೇ ಕಾರಣಕ್ಕೂ ಅಡಿಗೆಮನೆ ಕಡೆ ಮಾತ್ರ ಬರಬೇಡ . ಎಂದು ಕೆಲವು ದಿನ ಕಳೆದ ಮೇಲೆ ಸರಸುಗೆ ಬೇಸರವಾಗಿ ಮುದುಕಿಗೆ ಸಹಾಯ ಮಾಡಲು ಅಡಿಗೆ ಮನೆಗೆ ಬಂದಾಗ ಆಕೆ ಸೌದೆಗೆ ಬದಲಾಗಿ ಸೌದೆಯಂತೆ ಧಗಧಗನೆ ಉರಿಯುತ್ತಿದ್ದನ್ನು ನೋಡಿ ಸರಸು ಭಯದಿಂದ ಚೀರಿ ಮೂರ್ಛೆ ಹೋಗುತ್ತಾಳೆ. ಅನಂತರ ಜ್ಞಾನ ಬಂದ ಸರಸು ತಾನು ಹಿಂದೆ " ದೆವ್ವವೋ ಪಿಶಾಚಯೋ ಸಹಾಯ ಮಾಡಬೇಕು" ಎಂದಿದ್ದು ನೆನಪಾಗಿ ಮುದುಕಿ ಕುಳಿತಿದ್ದ ನೆಲವನ್ನು ನಮಸ್ಕಾರ ಮಾಡಿಕೊಂಡು ಕಣ್ಣೀರು ಸುರಿಸುತ್ತಾಳೆ, ಈ ಕಥೆಯನ್ನು ಕೇಳಿದಾಗ ' ಮಾನವರಿಲ್ಲದ ಮಾನವೀಯತೆ' ಈ ದೆವ್ವಕ್ಕೆ ಇದೆ ಎಂಬ ಅಂಶ ತಿಳಿಯುತ್ತದೆ.

ಇದೇ ರೀತಿ ಒಂದು ಸಾರಿ ಲೇಖಕರು ಮತ್ತು ಅವರ ಹತ್ತು ಹನ್ನೆರಡು ಜನ ಸೇರಿ ' ಪಿಕ್‌ನಿಕ್ ಪಾರ್ಟಿ'ಗೆ ಎಂದು ಒಂದು ಬಂಗಲೆಗೆ ಹೋದಾಗ ತಮ್ಮ ಸ್ನೇಹಿತರನ್ನು ಹೆದರಿಸಲು ತಾವೇ ಕಟ್ಟಿದ ಕಾಲ್ಪನಿಕ ಕಥೆ ತಮಗೆ ಭಯ ಮೂಡಿಸಿದ್ದನ್ನು ಸಹ ಈ ಪ್ರಬಂಧದಲ್ಲಿ ಹೇಳುತ್ತಾರೆ, ಹೀಗೆ ದೆವ್ವಗಳನ್ನು ಕುರಿತು ಹೇಳುವ ಲೇಖಕರು ದೆವ್ವ ಇದೆಯೋ, ಇಲ್ಲವೋ ಗೊತ್ತಿಲ್ಲ. ಆದರೆ ದೆವ್ವದ ಮೇಲಿನ ಭಯದಿಂದ ಆಸಕ್ತಿಯಿಂದ ಆ ಪರಿಕಲ್ಪನೆ ಇನ್ನೂ ನಮ್ಮಲ್ಲಿ ಉಳಿದುಕೊಂಡಿದೆ ಎಂದು ಹೇಳಿದ್ದಾರೆ.

**ಗೊಣಗುವ ಚಟ :**

ಈ ಪ್ರಬಂಧದ ವಸ್ತು ಗೊಣಗುವ ಚಟ. ಈ ಗೊಣಗುವಿಕೆ ಪ್ರತಿಯೊಬ್ಬರಲ್ಲಿಯೂ ಇದ್ದೇ ಇರುತ್ತದೆ. ಗೊಣಗುವಿಕೆ ಎಂದರೆ ತಮಗೆ ತಾವೇ ಮನಸ್ಸಿನಲ್ಲೀ ಏನಾದರೂ ಮಾತನಾಡಿಕೊಳ್ಳುವಂಥದ್ದು. ಬೈಯ್ಯುವಂಥದ್ದು. ಗೊಣಗುವಿಕೆ ಯಾವ ರೀತಿ ಇರುತ್ತದೆ ಎಂದು ಲೇಖಕರು ಕೆಲವು ಉದಾಹರಣೆಗಳನ್ನು ಕೊಡುತ್ತಾರೆ.

'ಏನು ಹಾಳು ಮಳೆಯೋ ! ಹಿಡಿದದ್ದು ಬಿಡಲೇ ಬಲ್ಲದು. ಎಲ್ಲಿ ನೋಡಿದರೂ ಕೊಚ್ಚೆ, ಮಂಕುಕವಿದ ಹಾಗಾಗಿ ಬಿಡುತ್ತೆ. ಅಷ್ಟುಕಾಣದೇ ನಮ್ಮವರು ಇದನ್ನು ದುರ್ದಿನ ಎಂದು ಕರೆದರೇ ! ಎಂದು ಮಳೆಯ ಬಗ್ಗೆ ' ಬೆಳಿಗ್ಗೆ ಎದ್ದರೆ ಸಾಕು. ಕಾದಿರುತ್ತಾನೆ ಈ ನಕ್ಷತ್ರಿಕ ! ನಾವೇನು ಮನೆ ಮಠ ಮಾರಿಕೊಂಡು ಓಡಿಹೋಗುತ್ತೇವೆಯ್ಯೆ ? ಕೊಟ್ಟೇ ಕೊಡುತ್ತೇವೆ, ಇವತ್ತಲದೆದ್ದರೇ? ನಾಳೆ,' ಎಂದು ಸಾಲಗಾರನಿಗೆ ಬೈಯ್ಯುವುದು , ಇವೆಲ್ಲಾ ಗೊಣಗುವಿಕೆಯ ಚಟವೆಂದು ಹೇಳುತ್ತಾರೆ.

ಮುಂದುವರೆದು ಗೊಣಗಾಟಕ್ಕೂ ರೇಗಾಟಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸುತ್ತಾರೆ, ಗೊಣಗಾಟದ ಬದಲು ರೇಗಾಟ ಮುಂದುವರೆದರೇ ಹಠಾತ್ತಾಗಿ ಬದಲಾವಣೆಗಳಿಲ್ಲದೇ ಸಾವಧಾನವಾಗಿ ಸಾಗುತ್ತದೆ. ಗೊಣಗಾಟ ಸಂಯಮದಲ್ಲಿರುವ ಅಸಂತೃಪ್ತಿ. ರೇಗಾಟ ಆಸ್ಫೋಟಿಸುವ ಅಸಂತೃಪ್ತಿ ಎಂದು ಹೇಳುತ್ತಾರೆ,

ಕೊನೆಯದಾಗಿ ಲೇಖಕರು ಗೊಣಗಾಟದ ಬಗ್ಗೆ ತಮ್ಮ ಅಭಿಪ್ರಾಯವನ್ನು ಹೇಳುತ್ತಾ " ಗೊಣಗಾಟವನ್ನು ಪ್ರಯತ್ನಪೂರ್ವಕವಾಗಿ ಬೆಳೆಸಿಕೊಳ್ಳಿ ಎಂದೇನೂ ನಾನು ಸಲಹೆ ಕೊಡುತ್ತಿಲ್ಲ. ನಾನು ಮೊದಲೇ ಹೇಳಿದಂತೆ ಅದು ನೈಸರ್ಗಿಕವಾದ ಗುಣವಾದ್ದರಿಂದ ಅದನ್ನು ಬೆಳೆಸಲು ಪ್ರಯತ್ನವೇ ಬೇಕಿಲ್ಲ. ಆದರೆ ಅದು ಆಸ್ಫೋಟಕ ವಸ್ತುವಾಗಿ ಮಾರ್ಪಡದಂತೆ ಹದದಲ್ಲಿಟ್ಟುಕೊಂಡರೇ ಸಾಕು " ಎಂದು ಸಲಹೆ ನೀಡಿದ್ದಾರೆ.

**ಬೇಡದ ಅತಿಥಿಗಳು :**

ಈ ಪ್ರಬಂಧದ ವಸ್ತು ಅತಿಥಿಗಳು ವೇದೋಪನಿಷತ್ತುಗಳ ಕಾಲದಲ್ಲಿದ್ದ ಅಂದಿನ ಜನ " ಅತಿಥಿದೇವೋಭವ" ಎಂದು ಮನೆಗೆ ಬಂದ ಅತಿಥಿಗಳನ್ನು ಪ್ರೀತಿಯಿಂದ ಕಾಣುತ್ತಿದ್ದರು, ಆಧುನಿಕ ಜೀವನದ ಇಂದಿನ ಜನರಿಗೆ ಅತಿಥಿಗಳು ಬೇಡದ ಅತಿಥಿಗಳಾಗಿದ್ದಾರೆಂದು ಲೇಖಕರು ಹೇಳುತ್ತಾರೆ.

ಭಾರತೀಯರಾದ ನಮ್ಮಲ್ಲೀ ಅತಿಥಿಸತ್ಕಾರ ರಕ್ತಗತವಾಗಿ ಬಂದಿದೆ. ಎನ್ನುತ್ತಾರೆ. ಯವನರೆಂದು ನಾವು ಅಲ್ಲಗೆಳೆಯುತ್ತಿದ್ದ ಗ್ರೀಕರು ಸಹಿತ ಅತಿಥಿ ಸತ್ಕಾರಕ್ಕೆ ಬಹಳ ಪ್ರಾಮುಖ್ಯತೆ ಕೊಟ್ಟಿದ್ದರಂತೆ. ಪ್ರಾಚೀನ ಗ್ರೀಕರು ಸಹಿತ ದೊರೆ ' ಅಡ್ಮಿಟಸ್' ತನ್ನ ರಾಣಿ ಸತ್ತು ಬಿದ್ದಿದ್ದಾಗಲೂ ಅತಿಥಿಯಾಗಿ ಮನೆಗೆ ಬಂದ ' ಹರ್ಕ್ಯುಲಸ್' ನಿಗೆ ಈ ವಿಷಯವನ್ನು ತಿಳಿಸದೇ ಅತಿಥ್ಯ ನಡೆಸಿದ್ದನ್ನು ಇಲ್ಲಿ ನೆನಸುತ್ತಾರೆ. ಆರ್ಯ ಧರ್ಮದಲ್ಲಿ ಅತಿಥಿ ಸತ್ಕಾರಕ್ಕೆ ಪ್ರಮುಖ ಸ್ಥಾನವಿತ್ತೆಂಬುದಂತೂ ನಿಜ. ಆ ಕಾಲ ಹೋಯಿತು. ಇವತ್ತು ಅದೇ ಆರ್ಯಧರ್ಮಕ್ಕೆ ಉತ್ತರಾಧಿಕಾರಿಯಾಗಿರುವ ನಾನು 'ಬೇಡದ ಅತಿಥಿಗಳು' ವಿಷಯವನ್ನು ಬಹಿರಂಗವಾಗಿ ನಾಚಿಕೆ, ಹೇಸಿಗೆ ಏನೂ ಇಲ್ಲದೇನೇ ಮಾತನಾಡುತ್ತಿದ್ದೇನೆ. ಭಾರತೀಯ ಸಂಸ್ಕೃತಿ ಇಳಿಮುಖವಾಗಿದೆ ಎನ್ನುವುದಕ್ಕೆ ಇದಕ್ಕಿಂತ ಸ್ಪಷ್ಟ ನಿದರ್ಶನ ಬೇಕಿಲ್ಲ ಎಂದು ತಮ್ಮ ಬಗ್ಗೆಯೇ ಬೇಸರ ವ್ಯಕ್ತಪಡಿಸುತ್ತಾರೆ.

ವಿವಾಗ ಕಾರ್ಯಕ್ರಮಗಳಿಗೆ ಆಹ್ವಾನ ಕೊಟ್ಟು ' ನಮ್ಮ ಬಳಗದವರ ಗುಂಪೇ ಸಾಕಾಗಿತ್ತು. ಇವರು ಬೇರೆ ಬಂದು ವಕ್ರಿಸಿದರಲ್ಲ! 'ಇವನು ಬೇಗ ಕಾಲುಕಿತ್ತರೆ ಸಾಕು. ಇನ್ನೊಬ್ಬರಿಗೆ ಜಾಗವಾಗುತ್ತದೆ, ಎನ್ನುವವರೇ ಹೆಚ್ಚು, ಇದಕ್ಕೆ ಇಂದಿನ ದಿನಗಳಲ್ಲಿ ಏರುತ್ತಿರುವ ಸರಕು ಸಾಮಾನುಗಳ ಬೆಲೆ ಹಾಗೂ ಆಧುನಿಕ ಯುಗದಲ್ಲಿ ಉಂಟಾಗಿರುವ ಕೆಲಸದ ಒತ್ತಡವೂ ಇದಕ್ಕೆ ಕಾರಣವಾಗಿರಬಹುದು ಅನ್ನಿಸುತ್ತದೆ. ಆದ್ದರಿಂದ ಇಂದಿನ

ದಿನಗಳಲ್ಲಿ ಬೇಕಾದ ಅತಿಥಿಗಳಿಗಿಂತ ಬೇಡವಾದ ಅತಿಥಿಗಳೇ ಹೆಚ್ಚಾಗುತ್ತಿದ್ದಾರೆ. ಮುಂದುವರಿದು ಹೇಳುವ ಲೇಖಕರು ನಾನು ಇದುವರೆಗೂ ಹೇಳಿದ್ದನ್ನು ಕೇಳಿ " ಇವನು ಶುದ್ಧ ಜಿಪುಣ " ಎಂದುಕೊಳ್ಳಬೇಡಿ, ಸಮಸ್ಯೆಯನ್ನು ವಾಸ್ತವಿಕ ದೇಷ್ಟಿಯಿಂದ, ಅರ್ಥಶಾಸ್ತ್ರದ ದೃಷ್ಟಿಯಿಂ ಪರಿಶೀಲಿಸಿದ್ದೇನೆ ಅಷ್ಟೆ. ನೀವು ನಮ್ಮ ಮನೆಗೆ ಬಂದರೆ ನನಗೆ ನಿಜವಾಗಿಯೂ ಸಂತೋಷ ಎಂದು ಹೇಳುವ ಮೂಲಕ "ಅತಿಥಿ ದೇವೋಭವ" ತತ್ವವನ್ನು ಮತ್ತೆ ನೆನಪಿಸುತ್ತಾರೆ.

<u>ಬೆಂಗಳೂರು</u> :

ಈ ಪ್ರಬಂಧದ ವಸ್ತು ಬೆಂಗಳೂರು ಲೇಖಕರು ಬೆಂಗಳೂರಿನ ವಿಶೇಷತೆ, ಅದು ಇತ್ತೀಚಿನ ದಿನಗಳಲ್ಲಿ ಯಾವ ರೀತಿ ಬದಲಾವಣೆ ಹೊಂದಿದೆ, ಬೆಂಗಳೂರು ವಾಸಕ್ಕೆ ಯೋಗ್ಯವೇ? ಎಂಬುದರ ಬಗ್ಗೆ ಈ ಪ್ರಬಂಧದಲ್ಲಿ ಚರ್ಚಿಸಿದ್ದಾರೆ.

ಅಯೋಧ್ಯ ಮಧುರಾ, ಮಾಯಾ, ಕಾಶಿ, ಕಾಂಚೀ, ಆವಂತಿಗಳಂತೆ ಬೆಂಗಳೂರು ಪುರಾಣ ಇತಿಗಾಸಗಳಲ್ಲಿ , ಪ್ರಸಿದ್ಧವಾದ ನಗರವಲ್ಲ, ಪೂರ್ವಿಕರ ಘನತೆಯನ್ನು ನಮ್ಮ ಮುಂದೆ ಮೆರೆಸಿ, ಇದನ್ನು ಕಟ್ಟಿದ ಮಹಾಪುರಷರೆದುರಿಗೆ ನಾವು ಎಷ್ಟು ಎತ್ತರವಾದವರು! ಎಂಬ ಅಲ್ಪ ಭಾವವನ್ನು ಮೂಡಿಸುವ ತಾಜ್ಮಮಹಲಿನಂತೆ ಪುರುಶನ ಶಿಲ್ಪಕೃತಿಗಳು. ಗುಡಿಗೋಪುರಗಳು, ಬೆಂಗಳೂರಿನಲ್ಲಿಲ್ಲ. ಆದರೆ ಟಾಟಾ ಇನ್‌ಸ್ಟಿಟ್ಯೂಟ್, ವಿಧಾನಸೌಧ, ಟೆಕ್ನಾಲಾಜಿಕಲ್, ಇನ್‌ಸ್ಟಿಟ್ಯೂಟ್ ಇಂತಹ ದೊಡ್ಡ ಕಟ್ಟಡಗಳು ಆಧುನಿಕ ಉದ್ದೇಶಗಳನ್ನು ಸಫಲಗೊಳಿಸುವ ಉದ್ದೇಶಕ್ಕಾಗಿ ನಿರ್ಮಿತವಾದಂತವು.

ಬೆಂಗಳೂರಿನ ನಿರ್ಮಾತೃ ಕೆಂಪೇಗೌಡ ನಗರದಲ್ಲಿ ಕಟ್ಟಿಸಿದ ಗೋಪುರಗಳು ನಾಲ್ಕು ಮೂಲೆಯಲ್ಲೂ ಇದೆ. ಆತ ಬಹಳ ಆಲೋಚನಾಪರವಾದ ಮನುಷ್ಯ. ಊರು ಇಲ್ಲಿಯವರೆಗೆ ಬೆಳೆಯಬಹುದೆಂದು ಲೆಕ್ಕಾಚಾರ ಹಾಕಿ ಆ ಗೋಪುರಗಳನ್ನು ಕಟ್ಟಿಸಿದನಂತೆ. ಆತನ ಮನಸ್ಸಿನಲ್ಲಿದ್ದುದು "ಇಲ್ಲಿಯವರೆಗೆ ಬೆಳೆಯುತ್ತದೆ" ಎಂದೋ ಅಥವಾ "ಇಲ್ಲಿಯವರೆಗೆ ಬೆಳೆಯಬಾರದು" ಎಂದೋ. ಆದರೆ ನಗರವು ಆ ಗೋಪುರಗಳನ್ನು ದಾಟಿ ಬೆಳೆಯುತ್ತದೆ. ಇಂದಿನ ದಿನಗಳಲ್ಲಿ ವಿದೇಶದ ಜನರು, ಅಕ್ಕ ಪಕ್ಕದ ರಾಜ್ಯಗಳಿಂದ ಜನರು ಉದ್ಯೋಗ , ವ್ಯಾಪಾರ ವ್ಯವಹಾರಗಳನ್ನು ಮಾಡಲು ಬೆಂಗಳೂರಿಗೆ ಬರುತ್ತಿರುವುದರಿಂದ ಜನಸಂಖ್ಯೆ ಹೆಚ್ಚಾಗಿ ಬೆಂಗಳೂರಿನಲ್ಲಿ ವಾಸ ಮಾಡುವುದೇ ಕಷ್ಟವಾಗಿದೆ. ಇನ್ನು "ಗಾರ್ಡ್‌ನ್ ಸಿಟಿ" ಎಂದು ಬಿರುದನ್ನು ಪಡೆದಿದ್ದು ಬೆಂಗಳೂರು ಕಟ್ಟಡಗಳು, ಕೈಗಾರಿಕೋದ್ಯಮಗಳು. ಮತೀಚ್ಚವಾಗಿ ನಿರ್ಮಾಣಗೊಳ್ಳುತ್ತಿರುವುದರಿಂದ " ಗಾರ್ಡ್‌ಸಿಟಿ" ಎಂಬ ಹೆಸರಿಗೆ ಕುಂದು ಬರಬಹುದೆಂಬ ಸಂದೇಹ ಉಂಟಾಗಿದೆ. ಆದ್ದರಿಂದ ಇನ್ನು ಮುಂದೆ ಯಾರಾದರೂ ಹೊಸ ಕೈಗಾರಿಕೆಗಳನ್ನು ಸ್ಥಾಪಿಸಬೇಕೆಂದು ಬೆಂಗಳೂರಿಗೆ ಬಂದರೆ, ಅವರಿಗೆ ಮೈಸೂರು, ಮಂಡ್ಯ, ಹಾಸನ, ಶಿವಮೊಗ್ಗ, ರಾಯಚೂರು, ಗುಲ್ಬರ್ಗದ ರಸ್ತೆ ತೋರಿಸಿ "ಅಲ್ಲಿಗೆ ದಯಮಾಡಿಸಿ" ಎಂದು ಹೇಳುವುದು ಬೆಂಗಳೂರಿಗೂ ಹಿತ, ಆ ಸ್ಥಳಗಳಿಗೂ ಹಿತ ಎಂದು ಲೇಖಕರು ಹೇಳುತ್ತಾರೆ.

<u>ಗಾಂಪರೊಡೆಯರ ಸಂಘ – ವಿಧಾನ ಸಭೆಯಲ್ಲಿ</u> :

ಈ ಪ್ರಬಂಧದ ವಸ್ತು ಗಾಂಪರೊಡೆಯರು. ಈ ಪ್ರಬಂಧದಲ್ಲಿ ಗಾಂಮಪರೊಡೆಯರ ಮುಗ್ಧತೆ ಮತ್ತು ಶಿಸ್ತನ್ನು ಕುರಿತು ಲೇಖಕರು ಚಿತ್ರಿಸಿದ್ದಾರೆ. ಒಮ್ಮೆ ಲೇಖಕರು ರಸ್ತೆಯಲ್ಲಿ ಗಾಂಪರೊಡೆಯರು ತುರುಗವನ್ನೇರಿ ಪ್ರಯಾಣಿಸುವುದನ್ನು ನೋಡುತ್ತಾರೆ. ಅವರ ಪಕ್ಕದಲ್ಲಿ ಶಿಷ್ಯರು ಗುರುಗಳ ಬಿರುದಾವಳಿಗಳನ್ನು ಹೇಳುತ್ತಾ ನಡೆಯುತ್ತಿದ್ದರು. ಗುರುಗಳು ಇದ್ದಕ್ಕಿದ್ದ ಹಾಗೆಯೇ ಆಯಾಸವಾಗಿ ಕುದುರೆಯಿಂದ ಕೆಳಕ್ಕೆ ಬಿದ್ದರು. ಶಿಷ್ಯರು ಗುರುಗಳನ್ನು ಎತ್ತದೇ ರಸ್ತೆಯಲ್ಲಿ ಬಿದ್ದಿದ್ದ ಪಾಗು, ಹಸಿಬೆಯ ಚೀಲ ಮೊದಲಾದವುಗಳನ್ನು ಎತ್ತಿ ಜತನ ಮಾಡುತ್ತಿದ್ದರು. ಲೇಖಕರು ಆಶ್ಚರ್ಯಗೊಂಡು "ಇದೇನು ಹೀಗೆ ಮಾಡುತ್ತೀರಿ? ಮೊದಲು ಗುರುಗಳ ಯೋಗಕ್ಷೇಮ ನೋಡಬೇಕಲ್ಲವೇ" ಎಂದು ಕೇಳಿದಾಗ, ಅವರ ಶಿಷ್ಯರಲ್ಲೊಬ್ಬ 'ನೋಡಿ ಹಿಂದೆ ಒಂದು ಸಲ ಬಿದ್ದ ಸಾಮಾನುಗಳನ್ನೆಲ್ಲಾ ಎತ್ತುವ ಸಾಹಸಕ್ಕೆ ಕೈ ಹಾಕಿ ಗುರುಗಳ ಕೋಪಕ್ಕೆ ಪಾತ್ರರಾದೆವು'. ಅನಂತರ ಗುರುಗಳೂ ನೆಲಕ್ಕೆ ಬಿದ್ದ ವಸ್ತುಗಳಲ್ಲಿ ಯಾವುದನ್ನು ಎತ್ತಬೇಕೆಂದು ಪಟ್ಟಿ ಬರೆದುಕೊಟ್ಟರು. ಈಗ

ಪಟ್ಟಿಯಲ್ಲಿರುವ ಸಾಮಾನುಗಳನ್ನೆಲ್ಲಾ ಎತ್ತಿದ್ದೇವೆ. ಗುರುಗಳ ಹೆಸರು ಪಟ್ಟಿಯಲ್ಲಿಲ್ಲ, ಅವರನ್ನುಎತ್ತಲಿಲ್ಲ, ಎಂದು ನಮ್ರತೆಯಿಂದ ಹೇಳುತ್ತಾನೆ. ಇದನ್ನು ಗಮನಿಸಿದಾಗ ಅವರಲ್ಲಿದ್ದ ಮುಗ್ದತೆ ಎದ್ದು ಕಾಣುತ್ತದೆ.

ಪ್ರಬಂಧದ ಶೀರ್ಷಿಕೆಯಲ್ಲಿರುವಂತೆ ಗಾಂಪರೊಡೆಯರು ಶಿಷ್ಯರೊಡನೆ ಒಮ್ಮೆ ವಿಧಾನ ಸಭೆಯ ಕಾರ್ಯಕಲಾಪಗಳನ್ನು ನೋಡಲು ಬರುತ್ತಾರೆ. ವಿಷಯ ತಿಳಿದ ಲೇಖಕರು ಬರುತ್ತಾರೆ. ವಿಧಾನಸೌಧದ ಭವ್ಯತೆಯನ್ನು ನೋಡಿ ಬೆರಗಾದ ಗುರುಗಳಿಗೆ ತಾವು ಸರಿಯಾದ ಸ್ಥಳಕ್ಕೆ ಬಂದೆವೋ ಇಲ್ಲವೋ ಎಂದು ಸಂದೇಹ ಬಂದು 'ಯಾರನ್ನಾದರು ವಿಚಾರಿಸಪ್ಪ' ಎಂದು ಶಿಷ್ಯ ಮಡ್ಡಿಗೆ ಹೇಳುತ್ತಾರೆ. ನಂತರ ವಿಧಾನಸೌಧದ ಮೆಟ್ಟಿಲು ಹತ್ತಿ ನುಗ್ಗುವುದರಲ್ಲಿದ್ದಾಗ ಚಪ್ರಾಸಿಯೊಬ್ಬ ಅವರನ್ನು ತಡೆದು 'ಯಾರಪ್ಪ ನೀವು? ಪರ್ಮಿಟ್ ಇದೆಯಾ ? ಎಂದು ಕೇಳುತ್ತಾನೆ. ಪರ್ಮಿಟ್‌ನ ಅರ್ಥ ತಿಳಿಯದ ಗಾಂಪರೊಡೆಯರು ಆತನ ಜೊತೆ ಜಗಳಕ್ಕೆ ಬೀಳುತ್ತಾರೆ. ಜೊತೆಯಲ್ಲಿದ್ದ ಲೇಖಕರು 'ಪಾಸ್' ಎಂದರೆ 'ಅಪ್ಪಣೆ ಚೀಟಿ' ಎಂದು ವಿವರಣೆ ಕೊಟ್ಟ ಮೇಲೆ ಅವರಿಗೆ ಅರ್ಥವಾಯಿತು. ಅಲ್ಲಿಂದ ರಿಸಪ್ಷನ್ ರೂಮಿಗೆ ಹೋಗಿ ಎಲ್ಲರೂ ಚೀಟಿ ಬರೆಸಿಕೊಂಡು ಹೋಗುತ್ತಾರೆ.ನಾವು ಹೋದಾಗ ಪ್ರಶ್ನೋತ್ತರಗಳ ಕಾಲ. ಗಾಂಪರೊಡೆಯರು, ಶಿಷ್ಯರೂ ಮೊದ ಮೊದಲು ಸಭಾಮಂದಿರದ ವೈಭವವನ್ನು ನೋಡಿ ದಂಗುಬಡಿದವರಂತೆ ಕುಳಿತಿದ್ದರು. ಅಲ್ಲಿ ಮೆತ್ತನೆಯ ಕುರ್ಚಿಗಳನ್ನು ಮುಟ್ಟಿ ಮುಟ್ಟಿ ನೋಡುವುದು, ಸವರುವುದು ಅಂತಹ ಚೇಷ್ಟೆಗಳನ್ನು ಮಾಡುತ್ತಾರೆ. ಅಲ್ಲದೇ ಬಜೆಟ್‌ನ ಅಧಿವೇಶನ ನಡೆಯುತ್ತಿದ್ದ ಸಂದರ್ಭದಲ್ಲಿ " ನೀವು ಏನೇ ಹೇಳಿ ಸ್ವಾಮಿ ಇದು ಸಣ್ಣತನ, ಈ ಗೋಪಾಳದ ಒಂದು ರೂಪಾಯಿಗೋಸ್ಕರ ಇಷ್ಟು ಚರ್ಚೆಯೇ? ಬೇಕಾದರೆ ಆ ರೂಪಾಯಿಗಳನ್ನು ನಮ್ಮ ಸಂಘದ ಫಂಡಿನಿಂದ ಕೊಟ್ಟುಬಿಡೋಣ" [8] ಎಂದು ಅಲ್ಲಿಯೂ ಗಲಾಟೆ ಮಾಡುತ್ತಾರೆ. ಆಗ ಅಲ್ಲಿದ್ದ ಸಭಿಕರೆಲ್ಲರೂ 'ಎಲ್ಲಿಂದ ಬಂತು ಈ ವಿಚಿತ್ರ ಮೃಗ'! ಎನ್ನುವಂತೆ ದಿಟ್ಟಿಸಿ ನೋಡುವರು. ಸ್ಥಬ್ದವಾಗಿದ್ದ ಸಭಾಧ್ಯಕ್ಷರು ಕೋಪದಿಮದ ಉರಿದೆದ್ದು 'ಕೂತುಕೊಳ್ಳಿ ಕೂತುಕೊಳ್ಳಿ' ಎಂದು ಕೂಗಿದರು. ಒಡನೆಯೇ ಗುರುಗಳು ಪರವಾಗಿಲ್ಲ ನಿಂತುಕೊಂಡೇ ಮಾತನಾಡುತ್ತೇನೆ. ಸಭಾ ಮರ್ಯಾದೆಗೆ ಲೋಪ ಬರಬಾರದು. ದ್ವಾಪರ ಯುಗದಲ್ಲಿ ಶ್ರೀ ಕೃಷ್ಣ ಪರಮಾತ್ಮ ಪಾಂಡವರಿಗೆ ಅಕ್ಷಯ ಪಾತ್ರೆಯನ್ನು ಒದಗಿಸಿಕೊಟ್ಟಂತೆ ಎನ್ನುತ್ತಿದ್ದಂತೆ ಸಭೆಯಲ್ಲಿ ಕೋಲಾಹಲವೆದ್ದು 'ಯಾರು ಈ ಮುದುಕ'? 'ದಬ್ಬಿರಿ ಅವನ್ನ ಆಚೆಗೆ'! ಎಂದು ಕೂಗುವರು. ಚಪ್ರಾಸಿ ಅವರನ್ನು ಹೊರಕ್ಕೆ ತಳ್ಳಿದನು.

ಆಗ ಗುರುಗಳು 'ವಯಸ್ಸು ಅನುಭವ ಇರುವವರು ನಾವು. ಬುದ್ದಿಯ ಮಾತು ಹೇಳಬೇಕಾದದ್ದು ನಮ್ಮ ಕರ್ತವ್ಯ ನಮ್ಮ ಮಾತು ರುಚಿಸದಿದ್ದರೇ ತಪ್ಪು ಅವರದ್ದು' ಎಂದು ಹೇಳುವರು. ಈ ಪ್ರಬಂಧದಿಂದ ವಿಚಾರವಂತಿಕೆ, ಅನುಭವ ಇರುವ ಗುರುಗಳು ಇಂದಿನ ಜನರಿಗೆ ರುಚಿಸದಿರುವುದು ಕಂಡುಬರುತ್ತದೆ.

## ಡಾ. ವಿಶ್ವೇಶ್ವರಯ್ಯ ವೃತ್ತಿ ಮತ್ತು ಐತಿಹ್ಯ :

ಈ ಪ್ರಬಂಧ ವಸ್ತು ಡಾ ವಿಶ್ವೇಶ್ವರಯ್ಯ ಈ ಪ್ರಬಂದಧಲ್ಲಿ ಲೇಖಕರು ವಿಶ್ವೇಶ್ವರಯ್ಯ ನವರ ಸಾಧನೆ ಮತ್ತು ವ್ಯಕ್ತಿತ್ವದ ಬಗ್ಗೆ ತಿಳಿಸಿರುವರು ವಿಶ್ವೇಶ್ವರಯ್ಯ ನವರ ಕೆಲಸ ಎಂದು ಹೇಳುವುದಕ್ಕಿಂತ ವಿಶ್ವೇಶ್ವರಯ್ಯನವರು ಇಂತಹ ಶಿಸ್ತಿನ ವ್ಯಕ್ತಿ ಎಂಬುವುದಕ್ಕೆ ಲೇಖಕರು ಒಂದು ನಿದರ್ಶನ ಕೊಡುತ್ತಾರೆ ದಿವಾನರಾಗಿ ಸರ್ಕಾರೀ ಆಜ್ಞೆ ಬಂದಾಗ ಅದನ್ನು ತಾಯಿಯ ಪಾದಗಳ ಬಳಿ ಇಟ್ಟರು ಎನ್ನುತ್ತಾರೆ ಆದರೆ ಲೇಖಕರು ಹೇಳುವಂತೆ ಸೋಧರ್ಮಾವ ಪಾದದ ಬಳಿ ಎಂದು ಹೇಳಿರುವುದನ್ನು ತಿಳೀಯ್ಬಹುದು ಅದೇರೀತಿ ಅವರ ಬಂದುಗಳಲ್ಲಿ

--- ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 230

ಯಾರೊಬ್ಬರಿಗೂ ನೌಕರಿ ಕೊಡದೆ ಇದ್ದುದ್ದು ಸತ್ಯ ವಿಶ್ವೇಶ್ವರಯ್ಯನವರ ಶಿಸ್ತು ಕ್ರಮ ತರ್ಕ ಬದ್ದವಾದ ಆಲೋಚನೆ ನಿಷ್ಕರ್ಷತೆ ಇವು ಅವರ ಹುಟ್ಟುಗುಣಗಳು ಎಂದು ಲೇಖಕರು ಹೇಳುವರು ಅವರು ಯಾವುದೇ ಕೆಲಸಕ್ಕಾಗಲಿ ಪೂರ್ವ ಸಿದ್ಧತೆಯಿಲ್ಲದೆ ಕೈ ಹಾಕುತ್ತಿರಲಿಲ್ಲ ಲೇಖಕರ ಪ್ರಕಾರ ಎಲ್ಲರಿಗೆ ಹೇಗೆ ಗೌರವ ಸಲ್ಲಿಸುವರೋ ಆಗೇ ಮಕ್ಕಳಿಗೂ ಗೌರವ ಸಲ್ಲಿಸುತ್ತಿದ್ದರು ಬಡವರ ಅವಶ್ಯಕ ಸೇವೆ ಹಣ ಅಗತ್ಯ ಎಂದು ವಿಶ್ವೇಶ್ವರಯ್ಯನವರು ಹೇಳಿರುವರು ಎಂದು ಲೇಖಕರು ತಿಳಿದಿದ್ದರು.

ಲೇಖಕರು ಪ್ರಕಾರ ಹಣಾಗಾರರು ಅಧಿಕಾರದಲ್ಲಿರುವರು ಬಿತ್ತಿ ಸೇವೆ ನಿರೀಕ್ಷಿಸುತ್ತಾರೆ ಸರ್ ಎಂ ವಿಶ್ವೇಶ್ವರಯ್ಯನವರು ಜೋಗ ಮುಂದೆ ನಿಂತಾಗ ಎಷ್ಟೊಂದು ಶಕ್ತಿ ಪೋಲಾಗುತ್ತಿದೆ ಎಂಬ ಪದವನ್ನು ಬೇರೆ ವಿಷ್ಯದಲ್ಲಿ ಬಳಸಿದ್ದಾರೆ ಎಂಬುವುದು ಲೇಖಕರ ವಾದ ಮಹಾಪುರುಷರ ಮೆಲುಕು ಹಾಕುತ್ತಿದ್ದರು ಮತ್ತು ಭಾಗವದ್ಗೀತೆಗಳನ್ನು ಓದುವ ಅಭ್ಯಾಸವನು ಹೊಂದಿದ್ದರು ಸರ್.ಎಂ ವಿಶ್ವೇಶ್ವರಯ್ಯನವರು ಅವರು ಹೊರಗಡೆ ಪ್ರಮಾಣ ಮಾವುವ ಸಂದರ್ಭದ್ಲಲಿ ಪುಸ್ತಕಗಳ್ಳನು ಸೂಟ್ಕೇಸ್ನಲ್ಲಿ ಇಟ್ಟಿಕೊಂಡಿರುವುದನ್ನು ತಿಳಿದವು ಲೇಖಕರು ಅಭಿಪ್ರಾಯದ ಪ್ರಕಾರ ಇವರು ಹೇಳಿರುವ ಕೆಲವೊಂದು ಘಟನೆಗಳು ನಿಜವಾಗಿ ನೆಡೆದದ್ದು ಎಂಬ ಆಧಾರವಿಲ್ಲ ಎಂದು ಲೇಖಕರು ಹೇಳುತ್ತಾರೆ . ಇನ್ನೊಂದು ಸಾರಿ ವಿಶ್ವೇಶ್ವರಯ್ಯನವರು ಒಬ್ಬರಿಗೆ ಅವಕಾಶ ಕೊಟ್ಟಾಗ ಅವರು ಇಜಷ್ಟ ಕೈಲಾದಷ್ಟು ನಿಷ್ಠೆಯಿಂದ ಕೆಲಸ ಮಾವುತ್ತೇನೆ ನನಗೆ ಈ ಕೆಲಸಕ್ಕೆ ಬೇಕಾದಷ್ಟು ಶಕ್ತಿಯಿದೆಯೋ ಇಲ್ಲವೋ ಕಾಣೆ ಎಂದಾಗ ಅದಕ್ಕೆ ಪ್ರತ್ಯುತ್ತರ ವನ್ನು ವಿಶ್ವೇಶ್ವರಯ್ಯನವರು ನಿಮಗೆ ಶಕ್ತಿ ಇದೆಯೇ ಅಂತ ನಾನು ಕೇಳುತ್ತಿಲ್ಲ ಇದೆ ಅಂತ ನಾನು ಹೇಳುತ್ತಿದ್ದೇನೆ ಎಂದು ಹೇಳಿ ಆತನಲ್ಲಿ ಆತ್ಮ ವಿಶ್ವಾಸವನ್ನು ತುಂಬುತಾರೆ ಇಂತಹ ಘಟನೆಗಳು ವಿಶ್ವೇಶ್ವರಯ್ಯನವರು ಜೀವನದಲ್ಲಿ ಸಾಕಷ್ಟು ಆಗಿದೆ ಎಂದು ಲೇಖಕರು ಹೇಳುವರು

ಲೇಖಕರು ಕೊನೆಗೆ ತಾವು ಇಟ್ಟಿದ್ದ ಶೀರ್ಷಿಕೆಯನ್ನು ಗಮನಿಸಿ ವಿಶ್ವೇಶ್ವರಯ್ಯ ವೃತ್ತಿ ಮತ್ತು ಐತಿಹ್ಯ ಈ ದ್ವೈತ ಸಲ್ಲದು : ಅವರ ಮಟ್ಟಿಗೆ ವ್ಯಕ್ತಿಯೇ ಐತಿಹ್ಯ ಐತಿಹ್ಯವೇ ವ್ಯಕ್ತಿ ' ಎನ್ನಬಹುದು ಎಂದು ಲೇಖಕರ ಅಭಿಪ್ರಾಯ ಇದು ಸಹ ಲಲಿತ ಪ್ರಬಂಧಗಳ ಸಾಲಿಗೆ ಸೇರ್ಪಡೆಯಾಗುವುದು ಇಲ್ಲಿ ವ್ಯಕ್ತಿಯ ಬಗ್ಗೆ ಅವರ ಸಾಧನೆಗಳು ಹಾಗು ಅವರ ಪ್ರೋತ್ಸಾಹ ಅತ್ಯಮೂಲ್ಯ ಎಂದು ಲೇಖಕರು ತಿಳಿಸಿರುವರು

ಗಾನ ಪ್ರಪಂಚದ ಅಪೂರ್ಣ ಪ್ರಾಜ್ಞರು :

ಈ ಪ್ರಬಂಧದ ವಸ್ತು ಅಪೂರ್ಣರು ಪ್ರಾಜ್ಞರು ಲೇಖಕರು ಈ ಲೇಖನದಲ್ಲಿ ಮೊದಲಿಗೆ ಅಪೂರ್ಣತೆಯ ಬಗ್ಗೆ ಹೇಳುತ್ತಾರೆ ಅಪೂರ್ಣ ಪ್ರಾಜ್ಞರು ಯಾರು ಎಂಬುದನ್ನು ಗುರುತಿಸುತ್ತಾರೆ ಹಯಕನೊಬ್ಬ ಪೂರ್ಣ ಪ್ರಜ್ಞೆ ಅಲ್ಲವೇ ಎಂಬುವುದನ್ನು ಪರಿಶೀಲಿಸಿದಾಗ ನಾವು ಗಮನದಲ್ಲಿಟ್ಟುಕೊಂಡಿರುವುದು ಸ್ಫೂರ್ತಿಯಿಂದ ಬರಬಹುದಾದ ದೈವಿಕ ಪ್ರಜ್ಞೆಯ್ನಲ್ಲ ಅಭ್ಯಾಸದಿಂದ ಪಡೆಯಬಹುದಾದ ಜ್ಞಾನವನ್ನು ಅದಿಲ್ಲದಿರುವವರ ಸೃಷ್ಟಿಸುವ ರಸ ಅಪೂರ್ಣವಾದದ್ದು ಅದಿಲ್ಲದಿರುವ ಸೃಷ್ಟಿಸುವ ರಸಸ್ವಾದನೆಯ ಅಪೂರ್ಣವಾದದ್ದೇ ಎಂದು ಹೇಳುತ್ತಾರೆ ಲೇಖಕರ ಅಪೂರ್ಣ ಪ್ರಜ್ಞೆಯನ್ನು ಗುರುತಿಸುವಾಗ ಕೆಲವು ಗುಂಪುಗಳನ್ನು ಮಾಡಿಕೊಳ್ಳುತ್ತಾರೆ ಮೊದಲನೆಯದಾಗಿ ಸಂಗೀತವನ್ನೇ ತಮ್ಮ ವೃತಿಯಾಗಿಟ್ಟುಕೊಂಡವರು ಸಂಗೀತವನ್ನು ವೃತಿಯಾಗಿ ಉಳ್ಳವರು ಹಾಡುವುದು ಮುಖ್ಯವಾಗಿ ಇತರರ ಅನುದಕ್ಕಾಗಿ ಹೊಗಳಿಕೆಗಾಗಿ ಹಣಕ್ಕಾಗಿ ಕ್ಚೇರಿಯನ್ನು ಕೇಳಲು ಬರುವವರಲ್ಲಿ ಕೆಲವರಾದರೂ ಗಾಯಕನ ಜ್ಞಾನವನ್ನು ಅಳೆಯುವುದಕ್ಕೆ ಬೇಕಾದ ಮಾನದಂಡವನ್ನು ಸಿದ್ದವಾಗಿ ಇಟ್ಟುಕೊಂಡಿರುತ್ತಾರೆ

ಯಾವುದಾದರೊಂದು ತಪ್ಪು ಮಾಡಿದರೂ ಗರುಡ ಹಾವಿನ ಮೇಲೆ ಎರಗಿ ಹಿಡಿದಂತೆ ಹಿಡಿಯುತ್ತಾರೆ.! ಆದ್ದರಿಂದ ಸಂಗೀತವನ್ನು ವೃತ್ತಿಯಾಗಿಟ್ಟುಕೊಂಡುವರು ಪರಿಪೂರ್ಣಜ್ಞಾಕ್ಕಾಗಿ ಶ್ರಮಿಸಲೇಬೇಕು ಎಂದು ಹೇಳುತ್ತಾರೆ.

ಎರಡನೆಯ ಗುಂಪಿನವರು ಗಮಕಿಗಳು ಗದುಗಿನಭಾರತ ಹರಿಶ್ಚಂದರ ಕಾವ್ಯ ರಾಮಾಯಣ ದರ್ಶನಂ ಮೊದಲಾದ ಕಾವ್ಯಗಳನ್ನು ರಾಗವಾಗಿ ಓದುವರು ಇವರು ಸಾಹಿತಿಗಳೇ ಅಥವಾ ಸಂಗೀತಗಾರರೆ ಎಂಬುದು ನಿರ್ಧಾರವಾಗಿಲ್ಲ: ಇವರು ಸಾಹಿತಿಗಳೇ ಅಥವಾ ಸಂಗೀತಗಾರರೇ ಎಂಬುದು ನಿರ್ಧಾರವಾಗಿಲ್ಲ; ಇವರು ಯಾವ ಒರೆಗಲ್ಲಿಗೂ ಸಿಕ್ಕುವವರಲ್ಲ ಸಂಗೀತಗಾರ ಅವರಲ್ಲಿ ಏನಾದರೂ ತಪ್ಪು ಕಂಡು ಹಿಡಿದರೇ "ಇದೇನು ಸಂಗೀತ ಅವರಲ್ಲಿ ಏನಾದರೂ ತಪ್ಪ ಕಂಡು ಹಿಡಿದರೇ ಇದೇನು ಸಂಗೀತ ಕೆಟ್ಟುಹೋಯಿತೆ ಸ್ವಾಮಿ ? ಸರಸ್ವತಿ ವೀಣೆಯೊಂದನ್ನೇ ಹಿಡಿದಿಲ್ಲ. ಪುಸ್ತಕವನ್ನೂ ಹಿಡಿದಿದ್ದಾಳೆ. ನಮಗೆ ಮುಖ್ಯವಾದ್ದು ಸಾಹಿತ್ಯ: ಸಂಗೀತದ ಛಾಯೆ ಅದರ ಮೇಲೆ ಬೀಳುತ್ತೆ. ಅಷ್ಟೇ"[9] ಎನ್ನುವಂಥವರು'

ಮೂರನೆಯ ವರ್ಗದವರೆಂದರೇ ಸಹೃದಯರಾಗಿ ಸಂಗೀತದ ವಿಮರ್ಶೆ. ಮಾಡುವವರು ಸಂಗೀತಗಾರರೂ ಗಮಕಿಗಳೂ ಒಂದೊಂದು ಸಲವಾದರೂ ನುಣುಚಿಕೊಂಡು ಹೋಗಲಾರದೇ ಸಿಕ್ಕಿ

--- ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 240

ಬೀಳಬಹುದು ಆದರೆ ಈ ವಿಮರ್ಶಕರು ಹಿಡಿತಕ್ಕೆ ಸಿಕ್ಕುವವರಲ್ಲ ಎಂದು ಹೇಳುತ್ತಾರೆ.

ನಾಲ್ಕನೆಯ ಗುಂಪಿನ ಬಗ್ಗೆ ಹೇಳುತ್ತಾ ಲೇಖಕರು ನನ್ನಂಥವರ ಗುಂಪು ಎಂದೇ ಸಂಭೋಧಿಸುತ್ತಾರೆ. ಈ ಗುಂಪಿನವರು ಬೆಳಗ್ಗೆ ಸ್ನಾನಕ್ಕೆ ಹೋದಾಗ ಸಣ್ಣ ಅಥವಾ ದೊಡ್ಡದೊಂದು ರಾಗದಲ್ಲಿ ಹಾಡನ್ನು ಹಾಡುತ್ತಾರೆ. ಯುವಕನಿಗೆ ಪ್ರೇಯಸಿ ಇರುವಂತೆ ಇವರಿಗೆ ಸಂಗೀತ ನಮ್ಮ ಕಂಠ ಹೇಗಿದ್ದರೇನು ಶಾಸ್ತ್ರಜ್ಞಾನ ಪರಿಪೂರ್ಣವಾಗಿದ್ದರೇನು ಇಲ್ಲದಿದ್ದರೇನು! ಆ ಸಾಮರಸ್ಯ ಪರಿಪೂರ್ಣವಾಗಿದೆ ಅಷ್ಟೆ! ಇಂಥ ಚಿತ್ ನೈರ್ಮಲ್ಯದಿಂದ ಹೊರಡುವ ಗಾನ ಆ ನೈರ್ಮಲ್ಯವನ್ನೂ ಮತ್ತಷ್ಟು ನಿರ್ಮಲ ಮಾಡುತ್ತದೆ. ಲೋಕದಲ್ಲಿ ಅವ್ಯಾಜವಾದ ಸಕರ್ಮ ಹೊರಡಬೇಕಾದರೆ ಇಂಥ ಪ್ರಸನ್ನತೆಯಿಂದ ಪರಿಪೂರ್ಣ ಜ್ಞಾನದ ಹೆಸರಿನಲ್ಲಿ ಅದನ್ನು ಅಲ್ಲಗಳೆಯ ಬೇಡಿ ಎಂದು ಲೇಖಕರು ಹೇಳುತ್ತಾರೆ

<u>ಸಂಸ್ಕೃತಿ ಮತ್ತು ಸಾಹಿತ್ಯ</u> :

ಸಂಸ್ಕೃತಿ ಮತ್ತು ಸಾಹಿತ್ಯ ಎಂಬ ಎರಡು ವಿಷಯಗಳೂ ಈ ಪ್ರಬಂಧದ ವಸ್ತುವಾಗಿದೆ. ಅಳಿವಿನ ಅಂಚಿನಲ್ಲಿ ಸಾಗುತ್ತಿರುವ ನಮ್ಮ ಸಂಸ್ಕೃತಿಗೆ ಸಾಹಿತ್ಯ ಪುನರ್ಜನ್ಮವನ್ನು ನೀಡುತ್ತದೆ. "ಸಾಹಿತ್ಯದಿಂದಲೇ ಸಂಸ್ಕೃತಿಗೆ ಸಾಹಿತ್ಯವು ಪುನರ್ಜನ್ಮವನ್ನು ನೀಡುತ್ತದೆ ."ಸಾಹಿತ್ಯದಿಂದಲೇ ಸಂಸ್ಕೃತಿ ಉಳಿವು ಸಾಧ್ಯ" ಎಂಬುದನ್ನು ನಿರೂಪಿಸಲು ಲೇಖಕರು ಇಲ್ಲಿ ಪ್ರಯತ್ನಿಸಿದ್ದಾರೆ ನಾವು ಸಂಸ್ಕೃತಿ ಎಂದು ಕರೆಯುವ ದಿವ್ಯಾಮೃತ ದೊರಕುಹುದು ಸಾಹಿತ್ಯದಿಂದ ಮತ್ತು ಕಲೆಯಿಂದ ಶಾಸ್ತ್ರ ವ್ಯಾಸಾಂಗದಿಂದ ಪ್ರಾಪಂಚಿಕ ಜ್ಞಾನ ಹೆಚ್ಚುತ್ತದೆ, ಬುದ್ಧಿ ಹರಿತವಾಗುತ್ತದೆ. ಆದರೆ ಸಾಹಿತ್ಯ ವ್ಯಾಸಂಗದಿಂದ ನಮ್ಮ ಜೀವನ ಅನುಭವಕ್ಕೆ ಪುಷ್ಟಿ ಬರುತ್ತದೆ. ಮನಸ್ಸು ಉದಾರವಾಗುತ್ತದೆ ಹೃದಯ ವಿಶಾಲವಾಗುತ್ತದೆ ಎಂದು ಹೇಳುತ್ತಾರೆ. ಶಾಸ್ತ್ರ ಗ್ರಂಥಗಳನ್ನು ಸಂಸ್ಕೃತಿಯೊಂದಿಗೆ ಸಮೀಕರಿಸಿ ಹೇಳುವ ಲೇಖಕರು ಶಾಸ್ತ್ರ ಗ್ರಂಥಗಳನ್ನು ಓದುವುದು ಸ್ವಲ್ಪ ಕಷ್ಟದಕೆಲಸ ಅವುಗಳನ್ನು ಮನನ ಮಾಡುವುದು ಮತ್ತು ಕಷ್ಟದ ಕೆಲಸ. ಸಾಹಿತ್ಯವಾದರೆ ಒಂದಲ್ಲಾಒಂದು ಮಟ್ಟದಲ್ಲಿ ಎಲ್ಲರಿಗೂ ರುಚಿಸುತ್ತದೆ. ಸಾಹಿತಿ ನಮಗೆ ಏನನ್ನು ಬೋದಿಸಿತ್ತೇನೆಂದು ಹೇಳುವುದಿಲ್ಲ. ಸ್ವಾರಸ್ಯವಾದ ಕಥೆ ಹೇಳುತ್ತೇನೆ ಕೇಳಿ ಎನ್ನುತ್ತಾನೆ ಸುಂದರವಾದ ದೃಶ್ಯಗಳನ್ನು ತೋರಿಸುತ್ತೇನೆ ನೋಡಿ ಎಂದು ಕರೆಯುತ್ತಾನೆ, ಇದರಿಂದ ಅವರು ಜನರ ಮನಸ್ಸನ್ನು ಸುಲಭವಾಗಿ ಆಕರ್ಷಿಸಬಲ್ಲ ನಮ್ಮ ಬಾವನೆಗಳನ್ನು ಕೆರಳಿಸಿ ತನ್ನ ಪ್ರತಿಬೆಯ ಕಾವಿನಲ್ಲಿ ಅವುಗಳನ್ನು ಹಿತವಾದ ಸಮರಸದ ಪಾಕಕ್ಕೆ ಇಳಿಸುವ ಶಕ್ತಿ ಸಾಹಿತಿಗೆ ಇದೆ. ಆದರೆ ಈ ಶಕ್ತಿ ಶಾಸ್ತ್ರಕಾರನಿಗಿಲ್ಲ ಎಂದು ಹೇಳುತ್ತಾರೆ. ನಮ್ಮ ಕಣ್ಣೆದುರಿಗಿನ ಪ್ರಪಂಚ ಬೇಸರವಾದಂತ ಸಂದರ್ಭದಲ್ಲಿ ನಮ್ಮನ್ನು ವಾಸ್ತವ ಪ್ರಪಂಚದಿಂದ ಬೇರೊಂದು ಪ್ರಪಂಚಕ್ಕೆ ಕರೆದೋಯ್ದು ನೋವನ್ನು ಮರೆಸಿ ಮನಸಿನ ಸಂಕಟಕ್ಕೆ ಪ್ರತಿಬಂದಿಯೊಂದನ್ನು ಒದಗಿಸುವ ಶಕ್ತಿ ಸಾಹಿತ್ಯಕ್ಕಿದೆ. ಹಾಗೆಯೇ ಜ್ವಾಲಾಮುಖಿಯ ಗರ್ಭವನ್ನು ಒಕ್ಕುನೋಡುವುದು ಸಾಹಿತಿಗೆ ಸಾದ್ಯವಾದಂತೆ ಶಾಸ್ತ್ರಕಾರನಿಗೆ ಆಗುವುದಿಲ್ಲ.

ಕೊನೆಯಾದಾಗಿ ಹೇಳುತ್ತ ಸಾಹಿತ್ಯದ ವ್ಯಾಸಂಗ ಮುಖ್ಯವಾದುದು ನಾವು ಪರದೇಶದ ಸಾಹಿತ್ಯದಿಂದ ಸ್ಪೂರ್ತಿ ಪಡೆದಿದ್ದೇವೆ ಮುಂದೆಯೂ ಪಡೆಯಬೇಕು ಆದರೆ ವೇದೋಪನಿಷತ್ತುಗಳ ಕಾಲದಿಂದ ನಮ್ಮಲ್ಲಿ ಬೆಳೆದುಬಂದ

ಸಾಹಿತ್ಯದಲ್ಲಿ ನಮ್ಮ ಜನಾಂಗದ ಜೀವನಾಡಿ ಮಿಡಿಯುತ್ತಿದೆ. ಪಾಶ್ಚಾತ್ಯರಿಗೆ ಪುರಾತನ ಗ್ರೀಕ್ ಸಾಹಿತ್ಯ ಹೇಗೊ ಹಾಗೆ ನಮಗೆ ಪುರಾಣ ಇತಿಹಾಸ ಹಾಗೆಯೇ. ರಾಮಾಯಣ ಮಹಾಭಾರತ ಕಥೆಗಳು ಸಾವಿರಾರು ವರ್ಷಗಳಕಾಲ ನಮ್ಮ ಜನಾಂಗದ ಪ್ರತಿಭೆಯಲ್ಲಿ ನೆನೆದು ಅನುಪಮವಾದ ಅರ್ಥ ಸಂಪತನ್ನು ಭಾವ ಸಂಪತನ್ನು ಗಳಿಸಿಕೊಂಡಿದೆ ಇಂತಹ ಸಾಹಿತ್ಯ ನಿಧಿಯನ್ನು ಮರೆಯಲಾಗದು ಆದರಿಂದ ನಮ್ಮ ಜೀವನವನ್ನು ರೂಪಿಸಿಕೊಂಡು ಸಂಸ್ಕೃತರಾಗುವುದು ಕಷ್ಟದ ಕೆಲಸವಲ್ಲ. ಲೇಖಕರು ಹೇಳುವಹಾಗೆ ನಮ್ಮ ಜೀವನಕ್ಕೆ ಸಾಹಿತ್ಯ ಮತ್ತು ಸಂಸ್ಕೃತಿ ಜೀವನಕ್ಕೆ ಮೆರುಗು ಕೊಡುತ್ತದೆ ಎಂದು ಹೇಳಿದ್ದಾರೆ.

ರೇಡಿಯೋ ನಾಟಕ ಮತ್ತು ರಂಗಭೂಮಿ :

ರಂಗಭೂಮಿ ನಾಟಕದಲ್ಲಿ ರಂಗಸ್ಥಳ,ದೀಪಾಲಂಕಾರ ಕಣ್ಣಿಗೆ ಕಾಣುವ ನಟರು ಪ್ರೇಕ್ಷಕವೃಂದ ಇವೆಲ್ಲದರ ಪರಿಣಾಮದಿಂದ ನಟರು ಹಾಗು ಪ್ರೇಕ್ಷಕರ ಮೇಲೆ ಪ್ರಭಾವ ಬೀರುತ್ತದೆ. ರೇಡಿಯೋ ನಾಟಕದಲ್ಲಿ ಇತ್ತೀಚಿನ ದಿನಗಳಲ್ಲಿ ಆಸಕ್ತಿ ಕಡಿಮೆ ಕೆಲಸದ ಒತ್ತಡ ಆದ್ದರಿಂದ ಏಕಾಗ್ರತೆ ಇಲ್ಲದೆ ನಾಟಕ ಅವರ ಮನಸ್ಸನ್ನು ಮುಟ್ಟದಿರಬಹುದು ಆದರೂ ಕಲ್ಪನಾಶಕ್ತಿಯ ಅವಶ್ಯಕತೆಯು ಹೆಚ್ಚಾಗಿ ಅದನ್ನು ಬೆಳೆಸುತ್ತದೆಂಬ ದೃಷ್ಟಿಯಿಂದ ಸಂಭಾಷಣೆಯ ಸ್ವಾರಸ್ಯವನ್ನು ಹೆಚ್ಚಸಿ ನಟರ ಕಂಠಸ್ವರವನ್ನು ತಿದ್ದಿ ಅದರ ಮೇಲೆ ಸ್ವಾಮ್ಯವನ್ನು ಕೊಟ್ಟು ಮಾತಾಡುವ ಕಲೆಯನ್ನು ಬೆಳೆಸುತ್ತದೆಂಬ ದೃಷ್ಟಿಯಿಂದ ಉತ್ತಮ ಸಾಹಿತ್ಯವನ್ನು ಜನತೆಗೆಲ್ಲಾ ಒದಗಿಸುತ್ತದೆಂಬ ದೃಷ್ಟಿಯಿಂದ ರೇಡಿಯೋ ನಾಟಕವನ್ನು ಸ್ವಾಗತಿಸಬಹುದುದೆಂದು ಹೇಳುತ್ತಾರೆ. ರಂಗಭೂಮಿ ನಾಟಕ ನೋಡುವವನಿಗೆ ಕಣ್ಣು ಮತ್ತು ಕಿವಿಗಳು ಅವಶ್ಯಕ, ರಂಗಭೂಮಿಯ ನಾಟಕದಲ್ಲಿ ಕ್ರಿಯೆ ಕಾಡಿನಲ್ಲಿ ನೆಡೆಯುವುದಾದರಿ ಸೀನರಿಯನ್ನು ಬಳಸುವರು ಅದೇ ರೀತಿ ರಾಜನ ಆಸ್ಥಾನ ಸಿಂಹಾಸನ ಕಾಣಬಹುದು ಬೆಳಕು ಮತ್ತು ಕತ್ತಲೆಯ ಆವರಣವನ್ನು ಕಲ್ಪಿಸಬಹುದು ಅಲ್ಲದೆ ನಟ ನಟಿಯರ ಮುಖದ ಮೇಲೆ ಸುಳಿದು ಹೋಗುವ ಭಾವಗಳು ಅವರ ನಡಿಗೆಯ ನಿಲುವಿನ ಗಾಂಬಿರ್ಯ ಕಣ್ಣಿನ ಹೊಳಪು ಧೈರ್ಯ ಕಂಪಿಸುವ ತುಟಿಗಳು ಇವುಗಳಿಂದಾಗುವ ಪರಿಣಾಮ ಅಷ್ಟಿಷ್ಟಲ್ಲ, ರೇಡಿಯೋ ನಾಟಕಕ್ಕೆ ಈ ಸೌಲಭ್ಯಗಳು ಇರುವುದಿಲ್ಲ. ನಾಟಕ ಪ್ರಪಂಚದ ಅನುಭವ ಪಡೆಯಲು ನೋಡುಗರ ಮನಸಿನಲ್ಲಿ ಸ್ವಲ್ಪ ಮಟ್ಟಿಗೆ ಆದರು ಸಿದ್ದತೆ ನಡೆದಿರುತ್ತದೆ. ರಂಗ ಸ್ಥಳ ದೀಪಾಲಂಕಾರ ಕಣ್ಣಿಗೆ ಕಾಣುವ ನಟರು ಪ್ರೇಕ್ಷಕ ವೃಂದ ಇವೆಲ್ಲರ ಸಹಾಯದಿಂದ ವಿಶೇಷ ವಾತಾವರಣವನ್ನು ಸೃಷ್ಟಿಯಾಗಿ ಪ್ರಭಾವ ಬೀರುತ್ತದೆ. ರೇಡಿಯೋ ನಾಟಕದಲ್ಲಿ ಏಕಾಗ್ರತೆ ಇಲ್ಲದೆ ನಾಟಕ ಅವರ ಮನಸ್ಸನ್ನು ಮುಟ್ಟದಿರಬಹುದು ಆದರು ಕಲ್ಪನಾ ಶಕ್ತಿಯ ಅವಶ್ಯಕತೆಯು ಹೆಚ್ಚಾಗಿ ಅದನ್ನು ಬೆಳಸುತ್ತದೆಂಬ ದೃಷ್ಟಿಯಿಂದ ಸಂಬಾಷಣೆ ಸ್ವಾರಸ್ಯವನ್ನು ಹೆಚ್ಚಿಸಿ ನಟರ ಕಂಠ ಸ್ವರವನ್ನು ತಿದ್ದಿ ಅದರ ಮೇಲೆ ಸ್ವಾಮ್ಯವನ್ನು ಕೊಟ್ಟು ಮಾತಾಡುವ ಕಲೆಯನ್ನು ಬೆಳೆಸುತ್ತದೆಂಬ ದೃಷ್ಟಿಯಿಂದ ಉತ್ತಮ ಸಾಹಿತ್ಯವನ್ನು ಜನತೆಗೆಲ್ಲ ಒದಗಿಸುತ್ತದೆಂಬ ದೃಷ್ಟಿಯಿಂದ ರೇಡಿಯೋನಾಟಕವನ್ನು ಸ್ವಾಗತಿಸಬಹುದು ಎಂದು ಲೇಖಕರು ಹೇಳುತ್ತಾರೆ.

ಲೇಖಕರು ಒಟ್ಟಾರೆಯಾಗಿ ರೇಡಿಯೋ ನಾಟಕಕ್ಕೂ ಹಾಗು ರಂಗಭೂಮಿ ನಾಟಕಕ್ಕೂ ವ್ಯತ್ಯಾಸವನ್ನು ತಿಳಿಸಿರುವುದಾಗಿ ತಿಳಿಯಬಹುದು ಆದರೂ ಇದು ಲಲಿತ ಪ್ರಬಂಧಗಳ ಸಾಲಿಗೇ ಬರದೇ ಇರುವುದನ್ನು ಕಾಣಬಹುದು ಇದರಲ್ಲಿ ವ್ಯತ್ಯಾಸಗಳನ್ನು ಮಾತ್ರ ಕಾಣಬಹುದು ಆದ್ದರಿಂದ ಲಲಿತವಾಗಿ ಇಲ್ಲದಿರುವುದನ್ನು ಕಾಣಬಹುದಾಗಿದೆ.

**ತೆರೆದ ಮನ** :

ಈ ಪ್ರಬಂಧದ ವಸ್ತು ತೆರೆದ ಮನ. ಲೇಖಕರು ಇಲ್ಲಿ ತೆರೆದಮನದ ವೈಶಿಷ್ಟ್ಯತೆಯನ್ನು ಹೇಳಿದ್ದಾರೆ. ಸಾಮಾನ್ಯವಾಗಿ ಪ್ರತಿಯೊಬ್ಬರಲ್ಲಿಯೂ ಎರಡು ಮನಸ್ಸುಗಳಿರುವುದನ್ನು ಕಾಣಬಹುದು. ಒಂದು ಪರವಾದರೆ. ಮತ್ತೊಂದು ವಿರುದ್ಧವಾದುದು. ಒಬ್ಬ ಮನುಷ್ಯ ಒಳ್ಳೆಯವನುಎನ್ನಬಹುದು ಅದೇ ಮನುಷ್ಯನ ವಿಷಯದಲ್ಲಿ ದುರ್ಗುಣಗಳ ಆರೋಪ ಬರಬಹುದು: ನಾವು ಮಾಡಬೇಕೆಂದಿರುವ ಕೆಲಸ ನಮಗೆ ನ್ಯಾಯವೆಂದು ತೋರಿದರೆ ಮತ್ತೋಬ್ಬರಿಗೆ ಅದು ಅನ್ಯಾಯ ಎಂದು ತೋರಬಹುದು. ಹೀಗೆ ಒಂದಕ್ಕೊಂದು ವಿರುದ್ಧವಾದ ಎರಡು ಅಭಿಪ್ರಾಯಗಳು ಮುಂದೆ ಬಂದಾಗ ನಮ್ಮ ಮನೋಮಾರ್ಗ ಕವಲೊಡೆದು ನಿಂತು ಅವೆರಡರಲ್ಲಿ ಯಾವುದನ್ನು ಆರಿಸಿಕೊಳ್ಳಬೇಕು. ಎಂಬುದು ತೋರದೇ ಮನಸ್ಸು ಹೊಯ್ದಾಟಕ್ಕೆ ಒಳಗಾಗುತ್ತದೆ. ಇಂಥ ಸಂದರ್ಭಗಳಲ್ಲಿ ಯಾವುದು ಸರಿ ಎಂದು ನಿರ್ಣಯಿಸಲು ಸಹಾಯವಾಗುವಂತೆ ಶಾಸ್ತ್ರಜ್ಞರು "ನಿನ್ನ ಮನಸ್ಸು ತೆರೆದಿರಲಿ" [10] keep on open mind" ಎಂಬುದನ್ನು ನೋಡುವಾಗ ನಾವು ಯಾವುದಾದರೋಂದು ವಿಷಯದಲ್ಲಾಗಲೀ ತೀರ್ಮಾನಕ್ಕೆ ಬರುವ ಮುನ್ನ ಆ ಸಂದರ್ಭದಲ್ಲಿ ಪರಿಶೀಲಿಸಬೇಕಾದ ಅಂಶಗಳೆಲ್ಲಕ್ಕೊ ನಮ್ಮ ಮನಸ್ಸಿನಲ್ಲೀ ಸ್ಥಳ ಕೊಡಬೇಕು. ಯಾವ ಸಮಸ್ಯೆಯೇ ಆಗಲಿ ಅದಕ್ಕೆ ಹತ್ತು ಮುಖಗಳಿರುತ್ತವೆ. ಅವೆಲ್ಲವನ್ನೂ ನೋಡಬೇಕು ದಿಡೀರನೇ ತೀರ್ಮಾನಕ್ಕೆ ಬರದೇ ಸಾಕ್ಷ್ಯವೆಲ್ಲಾ ಬರುವವರೆಗೆ ಕಾದಿದ್ದು ಅನಂತರ ಅದೆಲ್ಲವನ್ನೂ ಪರಿಶೀಲಿಸಿ ತೀರ್ಮಾನ ಕೊಡಬೇಕು. ಆದ್ದರಿಂದ ನಮ್ಮ ಆತ್ಮದ ಕಿಟಗಿಗಳೆಲ್ಲವನ್ನೂ ತೆರೆದಿಡೋಣ ಎಂದು ಲೇಖಕರು ಹೇಳುತ್ತಾರೆ.

ತೆರೆದ ಮನಕ್ಕೆ ಲೇಖಕರು ನಿದರ್ಶನವಾಗಿ ನ್ಯಾಯಾಧೀಶರನ್ನು ಉದಾಹರಣೆ ಕೊಡುತ್ತಾರೆ. ನ್ಯಾಯಾಧೀಶರು ನ್ಯಾಯಲಯದಲ್ಲಿ ಅಪರಾಧಿಗೆ ಶಿಕ್ಷೆ ವಿಧಿಸುವ ಮುನ್ನ ಆತನ ಅಪರಾಧಗಳನ್ನು ತೆರೆದ ಮನದಿಂದ ಆಲೋಚಿಸಬೇಕು. ಅನಂತರ ಸರಿ ತಪ್ಪುಗಳನ್ನು ನಿರ್ಧರಿಸಿ ತೀರ್ಪನ್ನು ಕೊಡಬೇಕು ವಿಚಾರ ತಿಳಿತದೇ ತೀರ್ಪು ಕೊಟ್ಟರೂ ನ್ಯಾಯಕ್ಕೆ ಲೋಪಬಂದೀತು ಎಂದು ಲೇಖಕರು ನುಡಿಯುತ್ತಾರೆ. ತೆರೆದ ಮನದ ಬಗ್ಗೆ ಮುಂದುವರಿದು ಹೇಳುತ್ತಾಹೊ ಅನಭವಾಂಶಗಳ ಪ್ರವೇಶಕ್ಕಾಗಿ ಮನಸ್ಸನ್ನು ತೆರೆದಿಡುವುದಿಲ್ಲ. ನಮಗೆ ದೊರಕಿರುವ ಮತ್ತು ಮುಂದೆ ದೊರಕಬಹುದಾದ ಅನುಭವಾಂಶಗಳನ್ನು ನಿಷ್ಪಕ್ಷಪಾತವಾಗಿ ನೋಡುವುದು ಪೂರ್ವಗ್ರಹಗಳೂ ಸಂಕುಚಿತ ಭಾವಗಳೂ ತೇಲಿಗಲೆಂದು ಮನಸ್ಸಿನ ಬಾಗಿಲನ್ನು ತೆರೆಯುವುದು. ಎಂದು ಹೇಳಿ ಮತ್ತೆ ಮುಂದುವರಿದು ತೆರೆದಮನ ಎಂದರೆ ಅನುಭವವನ್ನು ವಿರೂಪಗೊಳಿಸದಂತೆ ವಸ್ತುಸ್ಥಿತಿ ಹೇಗಿದೆ ಹಾಗೆಯೇ ನೋಡುವುದು ಎನ್ನುತ್ತಾರೆ.

--- ಎ.ಎನ್. ಮೂರ್ತಿರಾವ್ ಬರೆದಿರುವ ಸಮಗ್ರ ಲಲಿತ ಪ್ರಬಂಧಗಳು ಪುಟ ಸಂಖ್ಯೆ 263

ಕೊನೆಯದಾಗಿ ಲೇಖಕರು ತೆರೆದಮನ ಎಂದರೆ ಪೂರ್ವಗ್ರಹಗಳು ರಾಕ್ಷಸರು: ಪ್ರೀತಿ ಮತ್ತು ಅದಕ್ಕೆ ಸಂಬಂಧಪಟ್ಟ ಅನುಕಂಪ ಇತ್ಯಾದಿ ಗುಣಗಳು ದೇವತೆಗಳೂ "ಆಗಮಾರ್ಥಂತು ದೇವನಾಂ. ಗಮನಾರ್ಥಂತು ರಕ್ಷಸಾಂ" ಆದ್ದರಿಂದ ನಮ್ಮ ಮನವನ್ನು ತೆರದಿಡೋಣ ಎಂದು ಹೇಳುತ್ತಾರೆ.

**ನೀಳಕಂಠ :**

_ಈ ಪ್ರಬಂದ ವಸ್ತು ನೀಳಕಂಠ ನೀಳಕಂಠ ನೀಳಕಂಠ ಎಂದರೆ ಬೇರೆಯುವರ ವಿಚಾರದಲ್ಲಿ ಮೂಗು ತೂರಿಸುವಂತಹವರು. ಇವರ ಬಗ್ಗೆ ಲೇಖಕರು ಈ ಪ್ರಬಂಧದಲ್ಲಿ ಪ್ರಸ್ತಾಪಿಸಿದ್ದಾರೆ. ಇತರರ ಜೀವನದಲ್ಲೂ ವ್ಯವಹಾಗಳಲ್ಲೂ ಸಲ್ಲದ ಕುತೂಹಲದಿಂದ ತಲೆಹಾಕಿ ಹೂಂದು ನೋಟವನ್ನು ಬೀರಿ ಪ್ರಶ್ನೆಗಳನ್ನು ಹಾಕಿ ಅವರಿಗೆ ಬೇಡದ ಸಲಹೆಗಳನ್ನು ಕೊಟ್ಟು ಬೇಸರ ಪಡಿಸುವ ಒಂದು ಜಾತಿಯ ಜನರುಂಟು ಅವರನ್ನು ಇಂಗ್ಲೀಷಿನಲ್ಲಿ nosey parker ಎಂದೂ rabber neck ಎಂದೂ ಕರೆಯಲಾಗುತ್ತದೆ. ಈ ಪದಗಳಿಗೆ ಸರಿಯಾದ ಪರ್ಯಾಯ ಪದ ಕನ್ನಡದಲ್ಲಿ ಇಲ್ಲವಾದ ಕಾರಣ ರಬ್ಬರ್ ನೆಕ್ಗೆ ಬದಲಾಗಿ ನೀಳಕಂಠ ಎಂಬ ಪದವನ್ನು ಬಳಸಿದ್ದಾರೆ. ಅಂದರೆ ಲೇಖಕರು ಹೇಳರುವುದು ಹಾಲಾಹಲವನ್ನು ನುಂಗಿದ ನೀಲಕಂಠನ ವಿಷಯವಲ್ಲ ನೀವು ಪತ್ರಿಕೆಯನ್ನು ಓದುತ್ತಿದ್ದರೆ ಹಿಂದೆ ನಿಂತು ಕತ್ತನ್ನು ಮುಂಚಾಚಿ ತಾವೂ ಓದುವರು ಮತ್ತೊಬ್ಬರೊಡನೆ ಮಾತನಾಡುತ್ತಿರುವಾಗ ಅಲ್ಲೇ ಸುಳಿದಾಡಿ ಆ ಮಾತನ್ನು ಕೇಳಲು ಪ್ರಯತ್ನಿಸುವವರು ನಿಮ್ಮ ಮನೆಯ ಮುಂದೆ ಕಾರು ಬಂದು ನಿಂತಾಗ ಬಂದವರು ಯಾರೆಂದು ಬಗ್ಗಿ ನೋಡುವ ನೆರಮನೆಯವರ ಗಂಡಹೆಂಡತಿಯರು ಒಟ್ಟಿಗೆ. ಹೋಗುತ್ತಿರುವಾಗ ಅವರ ಕಡೆಗೆ ತಿರುತಿರುಗಿ ನೋಡುವ ಮಹನೀಯರು ಇಂಥ ಜನರಿಗೆ "ನೀಳಕಂಠ ಎಂಬ ಪದ ಸೂಕ್ತವಾದದ್ದು ಎಂದು ಹೇಳುತ್ತಾರೆ.

ನೀಳಕಂಠ ಎಂಬ ಸಮಸ್ಯೆ ಐವತ್ತು ವರ್ಷಗಳ ಹಿಂದೆ. ಅಷ್ಟೇನೂ ಕಾಡುತ್ತಿರಲಿಲ್ಲ ಏಕೆಂದರೆ ಆಗ ಒಬ್ಬರ ಯೋಗಕ್ಷೇಮದ ವಿಷಯದಲ್ಲಿ ಮತ್ತೊಬ್ಬರು ಕುತೂಹಲವನ್ನು ತೋರುವುದು ತಪ್ಪು ಎನಿಸುತ್ತಿರಲಿಲ್ಲ ತೋರದಿದ್ದರೇ ತಪ್ಪಾಗುತ್ತಿತ್ತು ಆದರೆ ಇತ್ತೀಚಿನ ದಿನಗಳಲ್ಲಿ ಪಾಶ್ಚಾತ್ಯರ ವ್ಯಕ್ತಿ ಪ್ರಧಾನ ತತ್ವ ನಮ್ಮ ಮೇಲೆ ದಾಳಿ ಇಟ್ಟ ಮೇಲೆ " ಅವರ ಜೀವನ ಅವರದ್ದು ನಮಗೂ ಅದಕ್ಕೂ ಸಂಬಂಧವಿಲ್ಲ. ನಾವು ಅದರಲ್ಲಿ ತಲೆಹಾಬಾರದು" ಎಂಬ ಭಾವನೆಯೂ ಮತ್ತು " ನನ್ನ ಜೀವನ ನನ್ನು. ಅದಕ್ಕೂ ಇತರರಿಗೂ ಸಂಬಂಧವಿಲ್ಲ."ಎಂಬೆರಡು ಭಾವನೆಯನ್ನು ವಿಶೇಷವಾಗಿ ಒಪ್ಪಿ ಅದಕ್ಕನುಗುಣವಾಗಿ ನಡೆಯದಿದ್ದರೆ. ನಮ್ಮ ನಾಗರೀಕತೆಗೆ ಲೋಪ ಬಂದೀತು ಎನ್ನುವಷ್ಟರಮಟ್ಟಿಗೆ ಪಾಶ್ಚಾತ್ಯರ ತತ್ವ ಬೀರಿದೆ. ಮುಂದೆ ನೀಳಕಂಠನ ಗುಣಗಳನ್ನು ವರ್ಣಿಸುತ್ತಾ ನಮ್ಮಲ್ಲಿ

ಬಹುಕಾಲದಿಂದಲೂ ಹೃದಯದಿಂದ ಹೊರಹೊಮ್ಮಲು ಕಾದಿರುವ ಭಾವನೆಗಳನ್ನು ಹೊರಗೆಡಹುವ ಬಯಕೆ ಮಾನವನ ಹುಟ್ಟುಗುಣಗಳಲ್ಲಿ ಒಂದು ಅದು ನೀಳಕಂಠನ ಮುಖ್ಯ ಗುಣವಾದ ಕುತೂಹಲದ ಇನ್ನೋಂದು ಮುಖ ನಾವು ನಮ್ಮ ಆನಂದವನ್ನು ಇತರರೋಡನೆ ಪಾಲು ಮಾಡಿಕೊಳ್ಳಲು ಹೇಗೆ ಬಯಸುತ್ತೇವೋ

ಹಾಗೇ ಬಹುಶಃ ಅದಕ್ಕಿಂತ ನಮ್ಮ ದುಃಖವನ್ನೂ ಪಾಲು ಮಾಡಿಕೊಳ್ಳಲು ಬಯಸುತ್ತೇವೆ. ಅಂಥ ಸಮಯದಲ್ಲಿ ನೀಳಕಂಠ ನಮಗೆ ಅವಕಾಶವನ್ನು ಒದಗಿಸುತ್ತಾನೆ. ನಮ್ಮಲ್ಲೀ ಕಟ್ಟೆಯೊಡೆಯುವಷ್ಟು ತುಂಬಿರುವ ಸಂತೋಷವನ್ನೋ ದುಃಖವನ್ನೋ ಹೊರಹಾಕಿ ಮನಸ್ಸನ್ನು ಹಗುರ ಮಾಡಿಕೊಳ್ಳಲು ನೆರವಾಗುತ್ತಾರೆ. ಅವನಿಗೆ ಸಲ್ಲಬೇಕಾದದ್ದು ತಿರಸ್ಕಾರವಲ್ಲ. ಮೂದಲಿಕೆಯಲ್ಲ. ಕೃತಜ್ಞತೆ. ಅವನಲ್ಲೂ ಹೀಗೆ ಹಿಗ್ಗು, ಕೋಪ, ಕುಃಖ ತುಂಬಿಕೊಂಡು ಪ್ರಾಣ ತಿನ್ನುತ್ತಿರಬಹುದು. ನೀವು ಅವನ ವಿಷಯದಲ್ಲಿ ಆಸಕ್ತಿ ತೋರಿಸಿ ಪ್ರಶ್ನೆ ಹಾಕಿದರೇ ಅವನ ಮನಸ್ಸು ಹಗುರವಾಗಬಹುದೆಂದು ನೀಳಕಂಠನ ಮೇಲೆ ಅನುಕಂಪ ತೋರಿಸಿದ್ದಾರೆ.

ನೀಳಕಂಠರನ್ನು ನಾವು ಎರಡು ಬಗೆಯಾಗಿ ಕಾಣಬಹುದು ನಮ್ಮ ದುಃಖವನ್ನು ನೋಡಿ ಸಂತೋಷಪಡುವಂಥವರು. ಮತ್ತು ನಮ್ಮ ದುಃಖವನ್ನು ತಮ್ಮ ದುಃಖವೆಂದು ತಿಳಿದು ಸಹಭಾಗಿಯಾಗುವವರು ಮೊದಲನೆಯವರು ನಮ್ಮ ಹತಶತ್ರುಗಳು ಅವರ ಮೇಲೆ ನಮಗೆ ಕ್ರೋಧ ಹುಟ್ಟುವದು ಸಹಜ ಆದರೆ ಎರಡನೆಯವರು. ನಮ್ಮಲ್ಲಿ ಆದರವಿಟ್ಟುಆಸಕ್ತಿ ತೋರುವವರು ಅವರನ್ನು ದೂ ಮಾಡಿಕೊಂಡರೆ ಅದರಿಂದ ನಷ್ಟವಾಗುವುದು ನಮಗೆ ಎಂದು ಅವರ ಅವಶ್ಯಕತೆಯನ್ನು ಹೇಳುತ್ತಾರೆ.

ಕೊನೆಯದಾಗಿ ಲೇಖಕರು ಇತರರ ಕುಂದು ಕೊರತೆಗಳನ್ನು ಹೊಕ್ಕಳೆದು ನೋಯಿಸುವ ನಮ್ಮ ಆತ್ಮ ತೃಪ್ತಿಗೆ ಧಕ್ಕೆ ತರುವ ಇತರರನ್ನೂ ನೋಯಿಸುವ ಮನೋವೃತ್ತಿ ಇರುವ ನೀಲಕಂಠರಿಗೆ ಬಹಿಷ್ಕಾರ ಹಾಕೋಣ ಆದರೆ ಸಹಮಾನವರಲ್ಲಿ ಆಸಕ್ತಿ ತೋರಿಸುವಂಥಹ ಪಡುತ್ತಾರೆ. ಹಾಗೆ ನೋಡುವುದಾದರೇ ವಾಲ್ಮೀಕಿ, ವ್ಯಾಸ, ಷೇಕ್ಸಪಿಯರ್ ಇವರೆಲ್ಲರೂ ನಿರ್ಲಜ್ಜ ನೀಳಕಂಠರಾಗಿದ್ದಿರಬೇಕಲ್ಲವೇ? ಎಂದು ಪ್ರಶ್ನೆ ಮಾಡಿದ್ದಾರೆ.

**ಉಪಸಂಹಾರ :**

ಲೇಖಕರಾದ ಎ.ಎನ್ ಮೂರ್ತಿರಾವ್ ರವರು ತಮ್ಮ ಲಲಿತ ಪ್ರಬಂಧಗಳನ್ನು ಸುಂದರವಾಗಿ ಬರೆದಿದ್ದಾರೆ. ಅವರ ಅನುಭವಗಳನ್ನು ಪ್ರಬಂಧಗಳ ಮೂಲಕ ವಾಚಕರಿಗೇ ಹಂಚಿಕೊಂಡಿದ್ದಾರೆ ಎಂದು ತಿಳಿಯಬಹುದು ಅವರು ಬರೆದಿರವ ಮೂರು ಲಲಿತ ಪ್ರಬಂಧಗಳು ತನ್ನದೇ ಆದ ವಿಶೇಷತೆಯನ್ನು ಒಳಗೊಂಡಿದ್ದು ಒಂದೊಂದು ಅದರ ಪ್ರಭುತ್ವತೆಯನ್ನು ಮೆರೆದಿದೆ.ಇವುಗಳ ಮೂಲಕ ತನ್ನ ಬರವಣಿಗೆಯ ಸೆಳೆತ ಹಾಗು ಅನುಭವಧಾರೆ.ಪದಗಳ ವರ್ಣನೆ. ಇವುಗಳೆಲ್ಲವನ್ನೂ ಬಳಸಿಕೊಂಡು ರಮ್ಯವಾಗಿ ಅವರು ವಾಚದನನ್ನು ತನ್ನತ್ತ ಸೆಳೆಯುವಲ್ಲೀ ಪರಿಣಿತಿಯನ್ನು ಪಡೆದಿದ್ದರು. ಸಾಹಿತ್ಯವನ್ನು ಹೆಚ್ಚಿನ ರೀತಿಯಲ್ಲಿ ತಿಳಿದಿದ್ದು ಜ್ಞಾನಭಂಡಾರವನ್ನು ತಿಳಿದವರಾಗಿದ್ದರು. ಅವರ ಬರವಣಿಗೆ ಜ್ಞಾನಸಂಪತ್ತು ಅನುಭವ ಎಲ್ಲವನ್ನು ಒಳಗೊಂಡವರಾಗಿದ್ದರು ಆದರೂ ಅವರು ಯುವ ಲೇಖಕರಿಗೆ ದಾರಿದೀಪವಾಗಿದ್ದರು ಎಂದು ತಿಳಿಯಬಹುದು ಅವರ ಈ ಮೂರು ಲಲಿತ ಪ್ರಬಂಧಗಳಾದ "ಹಗಲುಗನಸುಗಳೂ" ಅಲೆಯುವಮನ" ಮಿನುಗುಮಿಂಚು"ಗಳಲ್ಲಿ ತನ್ನ ಪ್ರಭುದ್ಧತೆಯನ್ನು ಮೆರಿದಿರುವರು ಎಂಬುದಾಗಿ ಕಾಣಬಹುದಾಗಿದೆ.

ಅಧ್ಯಾಯ 04

## ಎ.ಎನ್ ಮೂರ್ತಿರಾವ್ ಅವರ ಲಲಿತ ಪ್ರಬಂಧಗಳಲ್ಲಿ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿ

'ವಿಚಾರ' ಎಂದರೇನು. ಎಂಬ ಪದಕ್ಕೆ ಹಲವಾರು ಅರ್ಥಗಳು ಇದ್ದು ಅವುಗಳನ್ನು ಈ ರೀತಿ ತಿಳಿಯಬಹುದಾಗಿದೆ. ವಿಚಾರವೆಂದರೆ. 'ಯೋಚನೆ ಮಾಡುವುದು" "ಆಲೋಚನೆ. ಮಾಡುವುದು" "ವಿಮರ್ಶೆ ಮಾಡುವುದು" "ನಿರ್ಣಯ ತೆಗೆದುಕೊಳ್ಳುವುದು" "ಪೂರ್ಣವಾಗಿ ವಿಚಾರ ಮಾಡುವವ" ತಿಳಿದು ನೋಡುವವ" ತಿಳುವಳಿಕೆಯುಳ್ಳವ 'ಅನುಭವವುಳ್ಳವ" "ಜ್ಞಾನಿವುಳ್ಳವ" ಎಂದು ಅರ್ಥವನ್ನು ಒಳಗೊಂಡವೂ ಎಂಬುದಾಗಿ ತಿಳಿಯಲಾಗಿದೆ. ವಿಚಾರ ವೆಂದರೆ ವೈಚಾರಿಕವುಳ್ಳವ ಎಂತಲೂ ಕರೆಯುವವರು

"ವೈಜ್ಞಾನಿಕ" ಎಂಬ ಪದವೂ ಸಹ ವಿಜ್ಞಾನಕ್ಕೆ ಸಂಬಂದಿಸಿದಾಗಿದೆ. " ಭೌತಿಕಶಾಸ್ತ್ರವನ್ನು ಬಲ್ಲವ""ವಿಜ್ಞಾನಿ" ಎಂತಲೂ ಕರೆಯುವರು ಒಟ್ಟಾರೆಯಾಗಿ ಈ ಪದಗಳ ತನ್ನ ಅರ್ಥವನ್ನು ವಿಶಾಲ ರೀತಿಯಲ್ಲಿ ತಿಳಿಸುವುದು ವಿಶಾಲ ಪದದ ಬಳಕೆಯ ಅರ್ಥವು ಸಹ ತನ್ನದೇ ಆದ ಕಾರ್ಯಕ್ಷಮತೆಯನ್ನು ಒಳಗೊಂಡಿದ್ದು ವಿಶಾಲ ಮನೋಭಾವನೆಯನ್ನು ಕಾಣುತ್ತೇವೆ. ಇದು ತುಂಬಾ ದೀರ್ಘವಾದ ಆಳವನ್ನು ಸಹ ಹೊಂದಿರುತ್ತದೆ. ದೀರ್ಘವಾದ ವಿಷಯಗಳ ಮೌಲೀಕರಣವು ಆಗುವುದು ಎಂದು ತಿಳಿಯಬಹುದಾಗಿದೆ.

ಲೇಖಕರು ತಮ್ಮ ಲಲಿತ ಪ್ರಬಂಧಗಳಲ್ಲಿ ತಮ್ಮ ವೈಯಕ್ತಿಕ ನಿಲವುಗಳನ್ನು ತೋರಿಸುವುದನ್ನು ಕಾಣಬಹುದಾಗಿದೆ. ಅವರ ಆಲೋಚನಾ ದೃಷ್ಟಿಯು ಸಹ ಅನಂತವಾದದ್ದು ಅವರ ಸಾಹಿತ್ಯದ ಬರಹಗಳು ಎಲ್ಲರನ್ನು ಆಕರ್ಷಿಸುವುದು ಹಾಗೆಯೋ ಇವರು ಸಾಹಿತ್ಯ ಲೋಕದಲ್ಲಿ ತನ್ನದೇ ವೈಚಾರಿಕವನ್ನು ಬೆಳೆಸಿಕೊಂಡಿರುವರು ವಿಶಾಲವಂತಿಕೆಯು ಅಪಾರವಾದದ್ದು ಲೇಖಕರು ವಿಚಾರದೃಷ್ಟಿಯು ಅತ್ಯದ್ಯುತವಾದದ್ದು ವಿಶಾಲವಂತಿಕೆಯು ಅಪಾರವಾದದ್ದು ಲೇಖಕರು ವಿಚಾರದೃಷ್ಟಿಯು ಅತ್ಯದ್ಯುವಾದದ್ದು ವಿಶಾಲಪರತೆಯು ಕೂಡ ಚಿಂತನೆಯ ಅಪಾದ ಗಣಿಯನ್ನು ಒಳಗೊಂಡಿದ್ದರು.

ಲೇಖಕರು ತಿಳಿವಳಿಕೆಯನ್ನು ಪಡೆದವರಾಗಿದ್ದು ಅವರ ವಿಚಾರ ದೃಷ್ಟಿಯ ಕೋನವು ಏಕ್ರತೆಯಿಂದ ಕೂಡಿತ್ತಾದರೂ ವೈಚಾರಿಕ ಕೃತಿಯಾದ " ದೇವರು " ಕೃತಿಯಲ್ಲಿ ಅಪಾದವಾಗಿ ಬರೆದಿರುವುದನ್ನು ಕಾಣಬಹುದಾಗಿದೆ. ಯಾವುದೇ ಒಂದು ವಿಚಾರವನ್ನು ತೆಗೆದುಕೊಂಡರು ಎಲ್ಲಾ ಮೂಲಗಳಿಂದ ವಿಚಾರಬಲ್ಲವರಾಗಿದ್ದರು.

ಲೇಖಕರು ತನ್ನ ಪ್ರಬಂಧವಾದ ಸಾಹಿತಿಯ ಚಹರೆ ಯಲ್ಲಿ ಒಬ್ಬ ಸಾಹಿತ್ಯಯು ಮತ್ತೊಬ್ಬ ಸಾಹಿತ್ಯ ಚಹರೆಯನ್ನು ಬರೆಯುವ ಸಂದರ್ಭದಲ್ಲಿ ಅವರಿಗಾದ ಕಳವಳವು ಅತ್ಯಂತ ರೊಮಾಂಚನ ಸ್ವತಃ ಲೇಖಕರು ಇನ್ನೊಬ್ಬರ ಬಗ್ಗೆ ವರ್ಣನೆ ಮಾಡುವುದು ಅಷ್ಟೊಂದು ಸುಲಭವಲ್ಲ ಎಂದು ಹೇಳವ ವ್ಯಕ್ತಿತ್ವವುಳ್ಳವರು ಎಂದು ತಿಳಿಯಬಹುದು.

ಇಲ್ಲಿ ಲೇಖಕರು ವೈಚಾರಿಕ ನಿಲುವು ಯಾವ ರೀತಿ ಇತ್ತು ಎಂಬುದಾಗಿ ತಿಳಿಯಬಹುದಾಗಿದೆ.

ಲೇಖಕರು ಅವರ ಪ್ರಬಂಧಗಳಲ್ಲಿ ಮೂಡನಂಬಿಕೆಯ ಬಗ್ಗೆ ವೈಚಾರಿಕ ದೃಷ್ಟಿಯನ್ನು ಬೀರಿ ಅದರ ವಿರುದ್ಧ ಸಾಹಿತ್ಯದ ರಚನೆಯನ್ನು ಮಾಡಿರುವುದನ್ನು ಕಾಣಗಬಹುದು ತನ್ನ ಜೀವನದ ಅನುಭವದ ವಿಚಾರಪೂರ್ಣಗಳನ್ನು ಬರಹದ ಬದುಕಿನಲ್ಲಿ ಬರೆದು ಸಾಗಿರುವುದು ಎಂದು ತಿಳಿಯಬಹುದು. ಲೇಖಕರು ತನ್ನದೇ ಆದ ಸ್ವಂತಿಕೆಯಿಂದ ತಮ್ಮ ಅತ್ಯಮೂಲ್ಯ ಪದಗಳ ಸಂಪತ್ತಿನಿಂದ ವೈಚಾರಿಕವನ್ನು ಕನ್ನಡಿಯ ಹಾಗೆ ತೋರಿಸಿರುವದನ್ನು ಕಾಣಲು ಅವರ ಬರಹಗಳು ಸಾಕ್ಷಿ ಎಂದು ನೊಡಬಹುದಾಗಿದೆ.

ಲೇಖಕರು ಪ್ರಕಾರ ಹೃದಯವಂತಿಕೆ ಬುದ್ಧಿವಂತಿಕೆಯ ಜೊತೆಗೆ ಮನುಷ್ಯರಲ್ಲಿ ವೈಚಾರಿಕತೆಯ ಇರಬೇಕು. ಯಾವುದೇ ಒಂದು ವಿಚಾರವು ಚರ್ಚೆಯ ಮೂಲಕ ಚಿಂತನೆಯ ಮೂಲಕ ಒಂದು ಸಿದ್ಧಾಂತವಾಗಿ ಬೆಳೆಯುತ್ತದೆ. ಆ ವಿಚಾರಗಳು ಸಿದ್ಧಾಂತಗಳು ಕಾಲದಿಂದ ಕಾಲಕ್ಕೆ ಬದಲಾಗಬಹುದು ಬೆಳವಣಿಗೆಯಾಗಬಹುದು ತನ್ನ ಬದುಕನ್ನು ವಿಕಸಗೊಳಿಸುವ ಜ್ಞಾನ ವೈಚಾರಿಕವನ್ನು ತಾನೇ ಬೆಳೆಸಿಕೊಳ್ಳಬೇಕಾಗುತ್ತದೆ. ಪಾರಂಪರಿಕ ತಿಳಿವಳಿಕೆಯನ್ನು ಪುನರ್ ನಮಿಕರಿಸುವುದು ವರ್ತಮಾನದ ಅನುಭವದ ಬೆಳಕಿನಲ್ಲಿ ಹೊಸ ತಿಳಿವಳಿಕೆಯನ್ನು ಹುಟ್ಟುಹಾಕುವುದು ವಿಚಾರವಂತಿಕೆಯ

ಕೆಲಸಹಾಗುತ್ತದೆ. ಹೀಗಾಗಿ " ಬುದ್ದಿವಂತಿಕೆ ಮತ್ತು ವಿಚಾರವಂತಿಕೆ ಒಂದು ನಾಣ್ಯದ ಎರಡು ಮುಖಗಳಿಂತಿವೆ." ವಿಚಾರವಾದದಿಂದ ವೈಚಾರಿಕವು ಬೆಳೆದು ನಿಲ್ಲುತ್ತದೆ.

ವೈಜ್ಞಾನಿಕ ಮತ್ತು ವೈಚಾರಿಕ ವಿಚಾರವಂತಿಕೆಯ ವೈಜ್ಞಾನಿಕ ಪದಗಳು ಮೊದಲು ಫ್ರಾನ್ಸ್ ನಲ್ಲಿ ಬಳಕೆಯಾದವು. ಹದಿನೆಂಟನೆಯ ಶತಮಾನದ ವಾಲ್ಟೇರ್ ಮಂಟೆಕ್ ಈ ಮೊದಲಾದ ಚಿಂತಕರು ಸಾರಿದ ವಿಚಾರ ಕ್ರಾಂತಿ ಜಗತ್ತಿನಾದ್ಯಂತ ಜನಸಮುದಾಯದಲ್ಲಿ ಜಾಗೃತಿಯೂನ್ನುಂಟು ಮಾಡಿತು ಇದು ಭಾರತದಲ್ಲಿಯು ಇಂತಹ ಪರಂಪರೆ ಬೆಳೆದುಕೊಂಡು ಬಂದಿದೆ. ಪಶ್ಚಿಮ ಬಂಗಾಳ ಮಹಾರಾಷ್ಟ್ರ ಹಾಗೂ ಕೇರಳ ದಂತಹ ರಾಜ್ಯಗಳಲ್ಲಿ ವಿಚಾರವಾದ ಬೆಳೆದುನಿಂತಿದೆ. ಕರ್ನಾಟಕದಲ್ಲಿ ಬುದ್ಧಿಭಾವಗಳ ಸಂಗಮವಾಗಿದೆ. ಇಲ್ಲಿ ಬುದ್ಧಿಯಷ್ಟೆ ಭಾವನೆಗಳಿಗೆ ಪ್ರಾಮುಖ್ಯತೆ ನೀಡಲಾಗಿದೆ.

ಸಮಾಜ ವ್ಯವಸ್ಥೆಯಲ್ಲಿ ವಿಚಾರವಂತಿಕೆ ವೈಚಾರಿಕವನ್ನು ಬೆಳೆಸುವುದು ಅನಿವಾರ್ಯವಾಗಿದೆ. ವಿಚಾರವಾದಿಗಳನ್ನು ಧರ್ಮ ವಿರೋಧಿಗಳೆಂದು ಸಾರಾ ಆಬೂರ್ ಕರ್ ಅವರು ಬರೆದಿರುವ ವೈಚಾರಿಕ ನೆಲೆಯಿಂದ ಆರಿಸಿಕೊಳ್ಳಲಾಗಿದೆ.

ಭಾವಿಸುತ್ತಾರೆ. ಬೈಬಲ್ ಕಲ್ಪನೆಗೆ ವಿರುದ್ಧವಾಗಿ ವೈಜ್ಞಾನಿಕ ಸತ್ಯವನ್ನು ಸಾರಿದ್ದಕ್ಕೆ ' ಹ್ಯಾಲೀ' 'ಕೋಪನೀಕಸ್' ಶಿರಚ್ಛೇಧನವಾಯಿತು. ಧರ್ಮದಲ್ಲಿ ಪೈಚಾರೆಕವನ್ನು ತಂದುದ್ದಕ್ಕೆ ವಚನ ಚಳುವಳಿಯ ಮೂಲಕ ವಿಚಾರಕ್ರಾಂತಿಯನ್ನುಂಟು ಮಾಡಿದ್ದಕ್ಕೆ ಶರಣರನ್ನು ಬೆನ್ನಟ್ಟೀ ಕೊಲ್ಲಲಾಯಿತು. ವಿಚಾರವಂತಿಕೆಯನ್ನು ಹೃದಯವಂತಿಕೆಯ ಮೂಲಕ ಕಸಿ ಮೂಡುವ ಕಾಯಕ ಇಂದು ನಡೆಯಬೇಕಾಗಿದೆ. ಲೇಖಕರು ಬರೆದಿರುವ ' ಗೌರಜ್ಜಿ ' ಪ್ರಬಂಧದಲ್ಲಿ ಇಂತಹ ಪ್ರಸಂಗವನ್ನು ಕಾಣಬಹುದು. ಹಬ್ಬ ಬಂತೆಂದರೆ ಮಕ್ಕಳಿಗೆ ಜೈಲಿಗೇ ಹಾಕಿದಂತೆ. ಇಲಿಯು ಬೋನಿಗೆ ಸಿಕ್ಕಿ ವಿಲವಿಲ ಒದ್ದಾಡುವ ರೀತಿಯಲ್ಲಿ ಅವರುಗಳ ಹಸಿವನ್ನು ಕಾಣುತ್ತಿರುತ್ತಾರೆ. ಆಗ ಗೌರಜ್ಜಯು ಪಾಪ ಮಕ್ಕಳು ದೇವರ ಹಾಗೆ ಅವಕ್ಕೇನು ಉಪವಾಸದ ಕಟ್ಟು ಏನಾದರೂ ಕೊಟ್ಟುಬಿಡಬಾರದೇ ಎನ್ನುವ ಸಂದರ್ಭದಲ್ಲಿ ಲೇಖಕರ ವೈಚಾರಿಕ ನಿಲುವುಗಳನ್ನು ತೋರಿಸಿರುವರು ಇಲ್ಲಿ ಲೇಖಕರ ಚಿಂತನೆ ವೈಚಾರಿಕವಾದುದು ಎಂದು ತಿಳಿವುಬಾಹುದು. ಲೇಖಕರು ಬರೆದಿರುವ 'ಲಲಿತೆಯ ವಿಧ್ಯಾಭ್ಯಾಸ ' ಪ್ರಬಂಧದಲ್ಲಿ ಕಾಣಬಹುದು ಲಲಿತೆಯು ವಿಧ್ಯಾಭ್ಯಾಸವನ್ನು ಅರ್ಧದಲ್ಲೇ ನಿಲ್ಲಿಸಿರುತ್ತಾರೆ ಆದ್ದರಿಂದ ಲೇಖಕರು ಚಿಂತನೆ ಮಾಡಿ ಲಲಿತಗೆ ವಿಧ್ಯಾಭ್ಯಾಸ ಮಾಡಿಸಬೇಕು ಇಂದು ಸ್ವತ: ಲೇಖಕರೇ ಪಾಠ ಹೇಳುವ ಕಾರ್ಯಕ್ಕೆ ಹೋಗಿ ಸಂಕಷ್ಟಕ್ಕೆ ಸಿಲುಕುತ್ತಾರೆ. ನಂತರ ಆಲೋಚನೆ ಮಾಡಿ ಪರ್ಯಾಯ ವ್ಯವಸ್ಥೆಯನ್ನು ಮಾಡಿ ಲಲಿತೆಯ ಆಂಗ್ಲಭಾಷೆಯಲ್ಲಿ ಪರಿಣಿತಿಯನ್ನು ಪಡೆಯುವಂತೆ ಮಾಡುತ್ತಾರೆ. ನಂತರ ಲಲಿತೆಯು ಲೇಖಕರಿಗೆ ತನ್ನ ಸಾಹಿತ್ಯಕ್ಕೆ ಬೇಕಾದ ಸಲಹೆ. ಬರವಣಿಗೆಯ ಸಹಾಯವನ್ನು ಮಾಡುವರೆಂದು ತಿಳಿಯವಹುದು ಇದರಿಂದ ತಿಳಿಯ ಬಹುದೇನೆಂದರೆ ಲೇಖಕರ ವೈಬಾರಿಕ ಅರಿವಿನಿಂಕ ಲಲಿತೆಯು ಪರಿಣಿತಿಯನ್ನು ಪಡೆಯವರು ಎಂದು ತಿಳಿಯಲಾಗಿದೆ. ಲೇಖಕರು ಬರೆದಿರುವ ' ಟೆಲಿಫೋನ್ ' ಪ್ರಬಂಧದಲ್ಲಿ ವೈಚಾರಿಕ ವೆಂದರೆ ಸ್ವತಃ ಲೇಖಕರ ಹತ್ತಿರ ಟೆಲಿಫೋನ್ ಇರುತ್ತದ ಆದರೆ ಅದರಿಂದ ತುಂಬಾ ಅನಾನಾಕೂಲಗಳೇ ಹೆಚ್ಚು ಕಿರಿಕಿರಿಯನ್ನುಂಟು ಮಾಡುತ್ತಾ ಇವೆ ಎಂದು ತಿಳಿಯುವರು ಆಗ ಲೇಖಕರ ಅಭಿಪ್ರಾಯ ವೆಂದರೆ ಎದುರಿನ ಮನೆಯವರನ್ನು ಪುಸಲಾಯಿಸಿ ಟಿಲಿಪೊಪನನ್ನು ಹಾಕಿಸಿಕೊಳ್ಳುವಂತೆ ಮಾಡಿ ಪ್ರಯೋಜನ ನಮಗೆ ಕಿರಿಕಿರಿ ಏನೇ ಇದ್ದರೂ ಅವರಿಗೆ ಆಗಲಿ ಎಂಬುದು ಲೇಖಕರ ವೈಬಾರಿಕ ನಿರ್ಣಯ ಎಂದು ತಿಳಿಯಬಹುದಾಗಿದೆ.

ಲೇಖಕರು ತನ್ನ ಪ್ರಬಾಧವಾದ ' ಹೆಂಡತಿಯ ಹೆಸರು ' ಈ ಪ್ರಬಂಧದಲ್ಲಿ ಹೆಸರುಗಳಲ್ಲೀ ಸರಳತೆಯು ಇದೇ ಎಂದು ವೈಚಾರಿಕವನ್ನು ಹೇಳಿರುವರು. ಸಾಮುನ್ಯವಾಗಿ ನಮ್ಮ ನಾಡಿನಲ್ಲೀ ಕಮಲ. ಶಾರದ. ಲಲಿತೆ. ಎಂದು ಕರೆಯುವರು. ಅದೇ ಬಂಗಾಳಿ ಕಥೆಗಳಲ್ಲಿ ಬರುವ ಹೆಸರುಗಳು ಲಾವಣ್ಯ. ಹೇಮಾಂಗನಿ, ಹೇಮಲಲಿತಾ. ಕಿರಣಮಾಲಾ. ರೂಪರೇಖಾ. ಎಂಬ ಹೆಸರುಗಳು ಇರುವುದನ್ನು ಲೇಖಕರು ಹೇಳಿರುವರು. ಕರ್ನಾಟಕಲ್ಲಿ ಹೆಂಡತಿಯನ್ನು ಕರೆಯಲು ಅಂತಹ ಹೆಸರುಹಳು ಇಲ್ಲಿವೆಂದು ಲೇಖಕರು ಹೇಳುವರು ಆಗೆಯೇ ಆಂಗ್ಲಭಾಷೆಯಲ್ಲೀ ಡಾರ್ಲಿಂಗ್. ಡಿಯರ್. ಸ್ವೀಟ್. ಲವ್. ಇದೆ ಎಂದು ಹೇಳುವರು ಲೇಖಕರು ಆದರೆ ನಮ್ಮ ನಾಡಿನಲ್ಲಿ ಸುಂದರವಾದ ಹೆಸರುಗಳು ಇವೆ ಎಂಬುದು ನನ್ನ ಅಭಿಪ್ರಾಯ. ಉದಾಹರಣೆಗೆ= ಸೀತಾ. ಜಾನಕಿ. ಲಕ್ಷ್ಮೀ. ಸರಸ್ವತಿ. ರಾಧೆ. ಎಂಬ ಸುಂದರ ಹೆಸರುಗಳು ಇರುವುದನ್ನು ಕಾಣವಹುದಾಗಿದೆ. ಲೇಖಕರು ಹರಕೆಯ ಪ್ರಬಂಧದಲ್ಲಿ ತನ್ನ ನಿಲುವನ್ನು ಸೊಗಸಾಗಿ ತಿಳಿಸುವರು ತನ್ನ ಹೆಂಡತಿಯಾದ ಲಲಿತೆಯ ತಿರುಪತಿ ತಿಮ್ಮಪ್ಪನಿಗೆ ಹರಕೆಯನ್ನು ಕಟ್ಟಿಕೊಂಡಿರುತ್ತಾಳೇ ನಮ್ಮ ಯಜಮಾನ ರಿಗೇ ಕೆಲಸ ಸಿಕ್ಕಿದರೆ ಮೊದಲ ತಿಂಗಳ ವೇತನವನ್ನು ಸಮರ್ಪಿಸುತ್ತೇನೆಂದು ಹೇಳುವರು. ಅದರೆ ಲೇಖಕರು ಆ ಮೂಡನಂಬಿಕೆಯ ಪದ್ಧತಿಯನ್ನು ಖಂಡಿಸುವರು.ಮೌಢ್ಯರು. ಇರುವವರೆಗೆ ಇವುಗಳ ಹೀಗೇ ನಿರಂತರವಾಗಿ ಸಾಗುತ್ತಿರುತ್ತದೆ. ಮೌಢ್ಯತೆಯ ವಿರುದ್ಧ ವಿವೇಕವನ್ನು ಕಾಣಬೇಕಾಗಿದೆ. ಎಂದು ಹೇಳಿ ಕೊನೆಗೂ ಹೆಂಡತಿಯು ಕಟ್ಟಿದ ಹರಕೆಯನ್ನು ತೀರಿಸುವುದಿಲ್ಲ. ಇದರಿಂದ ಲೇಖಕರು ವೈಚಾರಿಕ ಆಲೋಚನೆಯಲ್ಲಿ ಎಷ್ಟು ಮಗ್ನರು ಎಂದು ತಿಳಿಯಬಹುದು. ವೈಜ್ಞಾನಿಕ ಚಿಂತನೆಯು ನಡೆಯುವ ಕಾಲದಲ್ಲಿ ಇಂತಹವುಗಳನ್ನು ತಡೆಹಿಡಿಯಬೇಕೆಂಬುದು ಲೇಖಕರ ವಾದವು ಸಹ ಆಗಿದೆ , ಎನ್ನಲಾಗಿದೆ.

ಲೇಖಕರು ಬರೆದಿರುವ "ವ್ಯಾಪ್ರಗೀತೆ" ಇದರಲ್ಲಿಯು ಲೇಖಕರ ಯೋಚನೆಯು ಅತ್ಯಮೂಲ್ಯವಾದದು ಅವರು ಬರೆದಿರುವ ಸಂಗತಿಯೆಂದರೆ ಶಾನುಭೋಗರು ರಾತ್ರಿಯ ಸಮಯದಲ್ಲಿ ಅನಿವಾರ್ಯವಾಗಿ ಕಾಡಿನಲ್ಲಿ ಹೋಗುವ ಸಂದರ್ಭ ಬಂದಾಗ ಅವರು ನಡೆಯುವು ಸಂದರ್ಭದಲ್ಲಿ ಆಗುವ ಧೋರಣೆಯು ಅತ್ಯಂತ ರೋಮಾಂಚನವಾದುದು.

ಹುಲಿಯು ಆ ಸಂದರ್ಭದಲ್ಲಿ ಚಿಂತನೆ ನಡೆಸುವುದನ್ನು ತಿಳಿಯಬಹುದು ಚಿಂತನೆ ಎಂದರೆ ಶಾನುಭೋಗರ ಕಳಮಳ ವನ್ನು ತಿಳಿಯುವುದು ಲೇಖಕರು ಬರೆದಿರುವ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಯು ಇದರಲ್ಲಿ ಕಾಣಬಹುದು ಆ ಸಂದರ್ಭದಲ್ಲಿ ಶಾನುಭೋಗರ ಚಿಂತನೆ ಹುಲಿಯ ಆಲೋಚನೆ ಇವುಗಳೆಲ್ಲವನ್ನು ತುಂಬಾ ಸೊಗಸಾಗಿ ವರ್ಣಿಸಿರುವುದನ್ನು ಕಾಣಬಹುದು. ಲೇಖಕರು ಬರೆದಿರುವ "ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು' ಎಂಬ ಪ್ರಬಂಧದಲ್ಲಿ

ವೈಚಾರಿಕ ಧೋರಣೆಯನ್ನು ಹೇಳಿರುವರು ಈಗಿನ ಜೀವನದಲ್ಲಿ ಮನೆ ಎಂಬುವುದು ಸುಲಭವಲ್ಲಾ ಒಂದು ಮನೆಯನ್ನು ಕಟ್ಟಬೇಕಾದರೇ ಹಣವೂ ದುಬಾರಿರೀತಿಯಲ್ಲಿ ಖರ್ಚು ಆಗುವುದರಿಂದ ಅಂದರೆ ಬೆಲೆಯು ಗಗನಕ್ಕೆ ಹೋಗಿರುವುದರಿಂದ ಇಂದಿನ ಪರಿಸ್ಥಿತಿಯಲ್ಲಿ ಅದು ಸುಲಭದ ಮಾತಲ್ಲ ಕಟ್ಟಿ ಸಾಲಭಾದೆಯಿಂದ ಮನೆಯನ್ನು ಮಾರಲು ಮುಂದಾದಾಗ ಅವರ ಮಡದಿ ಲಲಿತೆಯು ತಡೆದು ಅದನ್ನು ಉಳಿಸಿಕೊಳ್ಳುವುದನ್ನು ಕಾಣಬಹುದಾಗಿದೆ. ಹಾಗು ಲೇಖಕರು "ನಿಲ್ಲುವುದಕ್ಕೆ ನೆರಳಾಗಿ ಸಣ್ಣದೊಂದು ಗುಡಿಸಲು" ಇದ್ದರೆ ಸಾಕು ಎಂಬ ಅಭಿಪ್ರಾಯ . ಆದರೆ ನನ್ನ ಭಾವನೆಯು ಹಿರಿಯರು ಹೇಳಿರುವ ಗಾದೆಯು ನೆನಪಾಗುತ್ತದೆ. "ಮನೆಕಟ್ಟಿನೋಡು" ಎಂದು ಹೇಳಿರುವರು ಅಂದರೆ ಮನೆಕಟ್ಟುವುದು ಮತ್ತು ಮದುವೆ ಮಾಡುವುದು ಸರಲವಲ್ಲಾ ಎಂಬುವುದು . ಹಾಗೆಯೇ ಮತ್ತೋಂದು "ಹಾಸಿಗೆ ಇದ್ದಷ್ಟು ಕಾಲುಚಾಚು" ಎಂಬುವುದು ಹಿರಿಯರ ಚಿಂತನೆ ಆದುದರಿಂದ ನಮ್ಮಲ್ಲಿ ಹಣವೂ ಎಷ್ಟಿದೆ ಅಷ್ಟಕ್ಕೇ ನೋಡಿ ಮನೆಕಟ್ಟಲು ಮುಂದಾಗಬೇಕು ಇಲ್ಲವಾದಲ್ಲಿ ಸಾಲ ಮಾಡಿದರೇ ಅದನ್ನು ತೀರಿಸುವ ಯತ್ನ ನಮ್ಮದಾಗಬೇಕು. ಇಲ್ಲಾವಾದಲ್ಲೀ ಸಾಲವನ್ನು ತೀರಿಸಲು ಪ್ರಯತ್ನಾಗಳಾದರೂ ಮಾಡಿದರೇ ಆಗ ಸುಂದರವಾದ ಸೊಬಗಾದ ಸೌಧವನ್ನು ಕಟ್ಟಬಹುದಾಗುತ್ತದೆ ಎಂದು ತಿಳಿಯಬಹುದುದಾಗಿದೆ.

ಲೇಖಕರು ಪ್ರಬಂಧವಾದ "ಹರಟೆ ಮತ್ತು ಪ್ರಬಂಧ"ದಲ್ಲಿ ಹರಟೆ ಹಾಗೂ ಪ್ರಬಂಧದ ಬಗ್ಗೆ ತಿಳಿಸಿದ್ದಾರೇ. ಹರಟೆಯು ಎಂಬುದು ಒಬ್ಬರಿಂದ ಸಾಧ್ಯವಿಲ್ಲಾ ಅದು ಚರ್ಚಾಕೂಟದಲ್ಲಿ ಪಾಲುಗೊಂಡಿರುವ ವಾದ ವಿವಾದವನ್ನು ಮಾಡಲು ಎರಡು ತಂಡಗಳು ಇರುವುದು ಒಂದು ಪರವಾದರೇ ಮತ್ತೊಂದು ವಿರೋಧ ಹೀಗೇ ಚರ್ಚೆಯ ಮೂಲಕ ಚರ್ಚಾವಿಚಾರಗಳು ಚರ್ಚಿತವಾಗುತ್ತಾ ಮುಂದುವರೆಯುತ್ತವೆ. ಅಲ್ಲಿ ಒಂದು ತಂಡದ ವಿಚಾರಗಳು ಮತ್ತೇಂದು ತಂಡಕ್ಕೆ ವೈಚಾರಿಕ ರೀತಿಯಲ್ಲೀ ಕೆಣಕುತ್ತಾ. ಅಪಹಾಸ್ಯ ಮಾಡುತ್ತಾ. ಇರುವುದನ್ನು ಕಾಣಬಹುದು ಇಲ್ಲಿ ವಿಚಾರಧಾರೆಯು ಬಲು ಮಹತ್ವವಾದದು ಒಂದು ತಂಡದ ಒಬ್ಬ ಸದಸ್ಯನು ವಿಫಲವಾದರೇ ಆ ತಂಡಕ್ಕೆ ಸೋಲು ಆಗುವುದನ್ನು ಕಾಣಬಹುದಾಗಿದೆ.

ಪ್ರಬಂಧವೂ ಸಹ ಇದಕ್ಕೆ ಒಂದು ಬಂಧವಿರುತ್ತದೆ ಆದರೆ ಹರಟೆಗೆ ಬಂಧವಿರುವುದಿಲ್ಲಾ. ಪ್ರಬಂಧವೂ ನಿರ್ದಿಷ್ಟತೆಯನ್ನು ಒಳಗೊಂಡಿರುತ್ತದೆ. ಅದರಲ್ಲಿ ವಿಷಯಗಳ ಸಂಕಲನವು ಒಳಗೊಂಡಿದ್ದು ವಿಷಯವೂ . ಸರಳತೆಯಿಂದ ಕೂಡಿದ್ದೂ ಅರ್ಥವಾಗುವ ರೀತಿಯಲ್ಲಿ ಸಮ್ರುಗವಾಗಿ ಶ್ರೋತೃಗಳಿಗೇ ತಿಳಿಯುತ್ತದೆ ಎಂದು ತಿಳಿಯಬಹುದಾಗಿದೆ. ಲೇಖಕರ ಪ್ರಕಾರ ವೈಚಾರಿಕ ಮನೋಭಾವನೆಯು ಹರಟೆ ಮತ್ತು ಪ್ರಬಂಧದಲ್ಲಿ ತನ್ನದೇ ಆದ ಪ್ರಭುತ್ವವನ್ನು ಮೆರೆಯುತ್ತದೆ ಎಂದು ತಿಳಿಯಬಹುದಾಗಿದೆ.

ಹರಟೆಯನ್ನು ವೈಜ್ಞಾನಿಕ ದೃಷ್ಟಿಯಲ್ಲಿ ನೋಡಬಹುದಾಗಿದೆ. ಅಲ್ಲಿ ಹಲವಾರು ಚಿಂತಕರು ಇರುವುದರಿಂದ ವೈಜ್ಞಾನಿಕ ಚಿಂತನೆಯನ್ನು ಒಳಗೊಂಡಿದ್ದು ತನ್ನದೇ ಆದ ರೀತಿಯಲ್ಲಿ ಮುಂದುವರೆಯುವುದನ್ನು ಕಾಣಬಹುದಾಗಿದೆ. ಹೀಗೆ ಲೇಖಕರು ತನ್ನ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಯಲ್ಲಿ ಇವುಗಳನ್ನು ಬರೆದಿರುವುದನ್ನು ತಿಳಿಸಬಹುದಾಗಿದೆ.

ಲೇಖಕರು ಬರೆದಿರುವ ಪ್ರಬಂಧಗಳಲ್ಲಿ ಅದರಲ್ಲೂ " ದೆವ್ವಗಳನ್ನು ಕುರಿತು" ಪ್ರಬಂಧದಲ್ಲಿ ವೈಚಾರಿಕ ನಿರ್ಣಯವನ್ನು ಹೇಳಿರುವರು ಲೇಖಕರು ವೈಚಾರಿಕ ದೃಷ್ಟಿಯಲ್ಲಿದ್ದು ಕೊಂಡು ತನ್ನ ಅನುಭವವನ್ನು ವಿಸ್ತಾರಗೊಳ್ಳುತ್ತಾ ಸಾಗಿದ್ದಾರೆ. ಇವರು ದೇವರು ಮತ್ತು ದೆವ್ವಗಳನ್ನು ನಂಬುತ್ತಿರಲಿಲ್ಲ ಎನ್ನವುದು. ಸತ್ಯ ಲೇಖಕರು ಈ ಪ್ರಬಂಧದಲ್ಲಿ ತಮ್ಮ ಜೀವನದ ಘಟ್ಟಗಳನ್ನು ಹಂಚಿಕೊಂಡಿದ್ದಾರೆ., ವೈಚಾರಿಕ ದೃಷ್ಟಿಯಿಂದ ಸಹ ತನ್ನ ನಿಲುವಿಕೆಯು ಮಾನವರಂತೆ ಮಮತೆ ಕರುಣೆಯಿಂದ ಕೂಡಿರುವುದನ್ನು ಈ ಪ್ರಬಂಧವು ತಿಳಿಸುತ್ತದೆ. ಎಂದು ಗಮನಿಸಬಹುದಾಗಿದೆ.

ಲೇಖಕರು ಬರೆದಿರುವ 'ಗೊಣಗುವ ಚಟ' ಎಂಬ ಪ್ರಬಂಧದಲ್ಲಿ ಪ್ರತಿಯೊಬ್ಬರೂ ಒಂದಲ್ಲಾ ರೀತಿಯಲ್ಲಿ ಗೊಣಗುವಿಕೆಯನ್ನು ಮಾಡುವರು ಎಂದು ಹೇಳುವರು ಇದು ಕೆಲವೊಂದು ಸಮಯದಲ್ಲಿ ಅತಿರೇಕಕ್ಕೆ ಒಳಗಾಗಿ ಬೇರೆಯವರ ದ್ವೇಷಕ್ಕೆ ಬಲಿಯಾಗಬಹುದು ಎಂದು ತಿಳಿಯಬಹುದು. ಲೇಖಕರು ಪ್ರಕಾರ ವೈಚಾರಿಕ ಅನಿಸಿಕೆಗಳು ಅವು ತನ್ನದೇ ದಾಟಿಯಲ್ಲಿ ಮುಂದುವರೆದು ಅದು ಶಪಿಸುವ ಜಪವನ್ನು ಕಾಯುತ್ತಿರುತ್ತದೆ. ಎಂದು ತಿಳಿಯಬಹುದಾಗಿದೆ. ಉದಾಹರಣಗೆ॥ ಏನು ಹಾಳು ಮಳೆಯೋ ಬಿಡುವುದಿಲ್ಲಾ" "ಏನು ಬಿಸಿಲೋ ತಾಪವೋ ಕಡಿಮೆಯಾಗುದಿಲ್ಲಾ 'ನಾವೇನು ಮನೆ ಮಠ ಮಾರಿಹೋಗ್ತಿವೋ" "ಇವನೊಬ್ಬ ಜುಗ್ಗ" ಎಂದು ಹೇಳುವುದು ಇವುಗಳು ವೈಚಾರಿಕ ಧೋರಣೆಯನ್ನು ಕಾಣಬಹುದಾಗಿದೆ. ಗೊಣಗುವ ಚಟ ಹೀಗೇ ಎಲ್ಲರಲ್ಲಿಯು ಇರುವುದನ್ನು ಕಾಣಬಹುದು. ಅದು ಜೀವನದಲ್ಲಿ ಸುರಳಿಯಂತೆ ಸುತ್ತುತ್ತ ಇರುತ್ತವೆ ಎಂದು ತಿಳಿಯಬಹುದಾಗಿದೆ. ಹೊಣಗುವ ಜೊತೆ ರೇಣಾಟವೂ ಇದ್ದಲ್ಲೀ ಅದು ಅತಿರೇಕಕ್ಕೆ ಒಳಗಾಗಿ ಬಿಸಿಬಿಸಿ ಖಜಾಯದ ರುಚಿಯನ್ನು ಕಾಣುವರು ಎಂದು ತಿಳಿಯಬಹುದಾಗಿದೆ ರೇಗಾಟವೂ ಒಬ್ಬೊಬ್ಬರಲ್ಲೀ ಒಂದೊಂದು ರೀತಿಯಲ್ಲಿ ಇದ್ದು ಅದು ವ್ಯತ್ಯಾಸದಿಂದ ಕೊಡಿದ್ದು ವೈಚಾರಿಕ ನಿಲವನ್ನು ಹೊಂದಿರುವುದಾಗಿ ತಿಳಿಯಬಹುದಾಗಿದೆ ಹೀಗೇ ಲೇಖಕರ ಪ್ರಕಾರ ವೈಚಾರಿಕ ಹಿತಗಳು ಇರುವುದನ್ನು ಕಾಣಬಹುದಾಗಿದೆ

ಲೇಖಕರು ಬರೆದಿರುವ "ಬೇಡದ ಅತಿಥಿಗಳು" ಎಂಬ ಪ್ರಬಂಧದಲ್ಲಿ ಲೇಖಕರು ಅತಿಥಿಗಳ ಬಗ್ಗೆ ಹೇಳಿರುವ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಯನ್ನು ತಿಳಿಯಬಹುದಾಗಿದೆ. ಹಿಂದಿನ ಕಾಲದಲ್ಲೀ ಅತಿಥಿಗಳನ್ನು "ಅತಿಥಿದೇವೋಭವ" ಎಂದು ಸತ್ಕಾರ ಮಾಡುತದ್ದರು ನಮ್ಮ

ಭಾರತೀಯ ಸಂಸ್ಕೃತಿಯಲ್ಲಿ ಅತಿಥಿ ಸತ್ಕಾರ ರಕ್ತಗತವಾಗಿ ಬಂದಿದೆ ಎನ್ನಬಹುದು ಹುಟ್ಟಿನಿಂದಲೇ ಜಿಪುಣರಾದವರು ಮನೆಗೆ ಬಂದವರನ್ನು ಸರಿಯಾಗೀ ನಿಗಾ ನೋಡದೇ ಯಾವಾಗ ಹೋಗುತ್ತೀರಾ ಎಂದು ಕೇಳುವುದು ಇದು ವೈಚಾರಿಕ ಎನ್ನಬಹುದು ಅತಿಥಿಗಳು ಅಪರೂಪಕ್ಕೆ ಬಂದರೂ ಈ ಜಾತಿಯವರು ತೋರುವ ಅಹಂ ಒಂದು ರೀತಿ ಧಾರುಣತೆ ಎನ್ನಬಹುದು ಈಗಿನ ಕಾಲದಲ್ಲಿ ಬೇಡದ ಅತಿಥಿಗಳು ಹೆಚ್ಚಾಗೆ ನಗರಭಾಗದಲ್ಲೀ ಕಾಣಬಹುದು. ಏಕೆಂದರ ಕೆಲಸದ ಒತ್ತಡ ಬೆಲೆ ದುಬಾರಿ ಇವುಗಳಿಂದ ಸರಿಯಾಗಿ ಅತಿಥಿಗಳನ್ನು ನೋಡಲಾಗುವುದಿಲ್ಲಾ ಆದರೆ ಗ್ರಾಮೀಣ ಭಾಗದಲ್ಲಿ ಆಗುವುದಿಲ್ಲಾ ಎಲ್ಲಾವೂ ಇಲ್ಲಿ ಬೆಳೆಯುವುದರಿಂದ ಎಷ್ಟು ದಿನ ಇದ್ದರೂ ಅತಿಥಿಗಳನ್ನು ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಾರೇ ಆದರೂ ಸಹ ಎಲ್ಲೂ ಇತ್ತೀಚಿನ ದಿನಗಳಲ್ಲಿ ಕೆಲಸವನ್ನು ಹರಸಿ ಪಟ್ಟಣದ ಭಾಗಗಳಿಗೆ ಹೋಗಿ ಕೆಲಸವನ್ನು ಮಾಡುವರು ಇವರು ಒಂದು ರೀತಿಯಲ್ಲಿ ಬೇಡದ ಅತಿಥಿಗಳೆಂದು ತಿಳಿಯಬಹುದಾಗಿದೆ ಗ್ರಾಮೀಣಭಾಗದಿಂದ ನಗರದೆಡೆಗೆ ಹೋಗುವ ಪರಿಪಾಟಲನ್ನು

ಎದುರಿಸುವ ವೈಚಾರಿಕ ಬದುಕು ಇವರದಾಗಿದೆ. ಎಂದರೆ ತಪ್ಪಾಗಲಾರದು ಆಗೆಯೇ ಕೆಲವು ಜನರು ಇರುತ್ತಾರೆ ಯಾರು ಏನು ಶುಭ ಕಾರ್ಯಮಾಡಿದರೂ ಅಲ್ಲಿಗೆ ಇವರು ಹಾಜರು ಆಗಿರುತ್ತಾರೆ. ಆಗ ಇವರನ್ನು ' ಇವನು ಯಾಕಾದರೂ ಬಂದನೋ ಇವನು ಬೇರೆ ಏಕ್ರಿಸಿದರಲ್ಲ ಎಂದು ಶಪಿಸುವರು ಇರುವುದನ್ನು ಕಾಣಬಹುದಾಗಿದೆ. ಆಗೆಯೊ ಬೇಡದ ಅತಿಥಿಗಳು ಬರುವುದನ್ನು ತಡೆಯಲು ಆಗದು ನಮ್ಮ ಸಮಾಜದಲ್ಲಿ ಇದು ಸರ್ವೆಸಾಮಾನ್ಯವಾಗಿದೆ. ಎಂದು ತಿಳಿಯಬಹುದಾಗಿದೆ.

ಲೇಖಕರು ಬರೆದಿರುವ ಗಾಂಪರೊಡೆಯದ ಸಂಘ- ವಿಧಾನಸಭೆಯಲ್ಲಿ . ವೈಚಾರಿಕೆ ನಿಲುವನ್ನು ಕಾಣಬಹುದಾಗಿದೆ. ಒಮ್ಮೆ ಕಾಂಪರೊಡೆಯರು ತುರುಗವನ್ನೆರಿ ಶಿಷ್ಯರೊಂದಿಗೆ ನಡುಮಧ್ಯಾಹ್ನ ಪ್ರಯಾಣ ಮಾಡುತ್ತಿದ್ದರೂ ಬಿಸಿಲಿನ ತಾಪದಿಂದ ಆಯತಪ್ಪಿ ಗುರುಗಳು ಬಿದ್ದು ಬಿಟ್ಟರು ಆಗ ಅಲ್ಲೆ ಇದ್ದ ಲೇಖಕರು ನೋಡುತ್ತಿದ್ದರು ಆದರೆ ಅವರ ಶಿಷ್ಯರು ಅವರನ್ನು ಎತ್ತದೇ ಕೆಳಗೆ ಬಿದ್ದಿರುವ ವಸ್ತುಗಳನ್ನು ಮಾತ್ರ ಎತ್ತುತ್ತಿದ್ದರು ಆಗ ನಾನು ಗುರುಗಳನ್ನು ಎತ್ತಲಿಲ್ಲವಲ್ಲಾ ಎಂದಿದ್ದಕ್ಕೆ ? ಶಿಷ್ಯರಲ್ಲಿ ಒಬ್ಬನು ಚೀಟಿಯಲ್ಲಿ ಆ ರೀತಿ ಬರೆದಿಲ್ಲಾ ಎಂದಿದ್ದಕ್ಕೆ ? ಎಂದಿದ್ದಕ್ಕೆ ? ಶಿಷ್ಯರಲ್ಲಿ ಒಬ್ಬನು ಚೀಟಿಯಲ್ಲಿ ಆ ರೀತಿ ಬರೆದಿಲ್ಲಾ ಎಂದು ಮುಗ್ಧತೆಯನ್ನು ತೊರಿಸಿದನು ಆಗ ಇದನ್ನು ಗಮನಿಸಿದಾಗ ವೈಚಾರಿಕ ವಿಚಾರಗಳನ್ನು ತಿಳಿಯಬಹುದು. ಗುರುಗಳು ಹೇಳಿದ ರೀತಿಯಲ್ಲಿ ಶಿಷ್ಯರೂ ನಡೆಯುವರು ಎಂದು

ವೈಜ್ಞಾನಿಕ ದೃಷ್ಟಿಯಿಂದ ತಿಳಿಯಬಹುದುದಾಗಿದೆ. ಇಲ್ಲಿ ಗುರುಗಳು ಪಟ್ಟಿಯನ್ನು ಬರೆದುಕೊಟ್ಟು ' ನಾನು ಬಿಟ್ಟರೆ ನನ್ನನ್ನು ಎತ್ತಬೇಕು' ಎಂದು ಹೇಳುವುದನ್ನು ಈ ಸಂದರ್ಭದಲ್ಲಿ

ಕಾಣಬಹುದಾಗಿದೆ. ಹಾಗೂ ವಿಧಾನಸಭೆಯಲ್ಲಿ ಚರ್ಚೆ ನಡೆಯುವ ಸಂದರ್ಭದಲ್ಲಿ ಗಾಂಪರೊಡೆಯರು ಹಾಗೂ ಶಿಷ್ಯಂದಿರು ಅಲ್ಲಿ ಆಗುವ ಫಜೀತಿ ಪೀಕಲಾಟ ಕಲಾಪಕಲಹ ಮಾತುಕತೆ ಹೀಗೆ ನಾನಾ ರೀತಿಯಲ್ಲಿ ಆಲೋಚನೆಗಳನ್ನು ಶಿಷ್ಯಂದಿರು ಕಾಣುವ ಪರಿಪಾಟಲನ್ನು ಕಾಣಬಹುದಾಗಿದೆ.

ಲೇಖಕರು ಬರೆದಿರುವ ಪ್ರಬಂಧವಾದ 'ಡಾಕ್ಟರ್ ವಿಶ್ವೇಶ್ವರಯ್ಯ ವ್ಯಕ್ತಿ ಮತ್ತು ಐತಿಹ್ಯದಲ್ಲಿ ವೈಚಾರಿಕ ಹಾಗೂ ವೈಜ್ಞಾನಿಕ ದೃಷ್ಟಿ ಕೋನವನ್ನು ಇದರಲ್ಲಿ ಇದರಲ್ಲಿ ಇರುವುದನ್ನು ತಿಳಿಯಬಹುದು. ಇಲ್ಲಿ ವಿಶ್ವೇಶ್ವರಯ್ಯನವರ ವೈಚಾರಿಕ ಬದುಕು ಹಾಗೂ ವೈಜ್ಞಾನಿಕ ಚಿಂತನೆಯ ಅಪಾರ ಕೊಡುಗೆಯನ್ನು ನೀಡಿರುವರು ಲೇಖಕರು ಪ್ರಬಂಧಗಳಲ್ಲಿ ಹಲವಾರು ವೈಜ್ಞಾನಿಕ ನೆಲೆಯನ್ನು ಕಾಣಬಹುದಾಗಿದೆ. ಅದರಲ್ಲಿಯು ಡಾ.ವಿಶ್ವೇಶ್ವರಯ್ಯನವರ ವೈಜ್ಞಾನಿಕ ರೀತಿಯಲ್ಲಿ ನಮ್ಮ ನಾಡಿಗೆ ಕೊಡುಗೆಯನ್ನು ನೀಡಿದ್ದಾರೆ. ಇವರ ಸಾಧನೆ ಎಂದರೆ ಕೃಷ್ಣ ರಾಜ ಸಾಗರದಲ್ಲಿ ಕೃಷ್ಣರಾಜ ಅಣೆಕಟ್ಟುಯು ಅತ್ಯಮೂಲ್ಯವಾದದ್ದು ಅದೇ ರೀತಿ ಶಿವನಸಮುದ್ರದಲ್ಲಿ ಜಲವಿದ್ಯುಚ್ಛಕ್ತಿಯನ್ನು ಕಂಡು ಹಿಡಿದಿರುವುದು ಇವರ ಕೊಡೊಗೆ ಲೇಖಕರು ಹೇಳುವಂತೆ ಬಮ್ಮ ಜೋಗ್ ಜಲಪಾತಕ್ಕೆ ಬೇಟಿ ನೀಡಿದ ಸರ್. ಎಂ. ವಿಶ್ವೇಶ್ವರಯ್ಯನವರು ' ಎಷ್ಟೊಂದು ಶಕ್ತಿ ಪೋಲಾಗುತ್ತಿದೆ. ಎಂದು ಹೇಳಿ ತನ್ನ ವಿಚಾರ ಮಂಥನದಿಂದ ಮೈಸೂರು ಸರ್ಕಾರದೊಂದಿಗೆ ಮೂತು ಕತೆ ನಡೆಸಿ ಅದರ ಉಪಯೋಗದಿಂದ ವಿದ್ಯುಚ್ಛಕ್ತಿಯನ್ನು ನೀಡಿರುವುದು ಅವರು ವಿವೇಕತೆಗೆ ಇದು ಮೆಟ್ಟಿಲು ಎಂದು ತಿಳಿಯಬಹುದು ಇವರು ತಮ್ಮ ವೈಜ್ಞಾನಿಕ ದೃಷ್ಟಿಯಿಂದ ನಮ್ಮ ನಾಡಿಗೆ ಅಪಾರವಾದ ಕಾಣಿಕೆಯನ್ನು ನೀಡಿದ್ದಾರೆ ಅಷ್ಟಲ್ಲದೇ ನಿವೃತ್ತರಾಗಿದ್ದರೂ ಸಹ ತಮ್ಮ ವಿಚಾರ ಮಂಥನದಿಂದ ಖ್ಯಾತಿಯನ್ನು ಪಡೆದವರಾಗಿದ್ದರು ಸಹ ತಮ್ಮ ವಿಚಾರ ಮಂಥನದಿಂದ ಖ್ಯಾತಿ ಯನ್ನು ಪಡೆದವರಾಗಿದ್ದರು. ಹಾಗು ಎಲ್ಲಾ ರೀತಿಯಲ್ಲಿ ತಮ್ಮ ಸ್ವಪ್ರತಿಭೆಯಿಂದ ಉನ್ನತ ಮಟ್ಟಕ್ಕೆ ಹೋಗಿರುವುದನ್ನು ಕಾಣಬಹುದಾಗಿದೆ. ಹೀಗೆ ಲೇಖಕರು ವೈಚಾರಿಕ ವ್ಯಕ್ತತ್ವವನ್ನು ಈ ಪ್ರಬಂಧದಲ್ಲಿ ಅವರ ಕ್ರಮ ಶಿಸ್ತು ತರ್ಕಬದ್ಧವಾದ ಆಲೋಚನೆ ನಿಷಪ್ಯತೆ ತಾರ್ಕಿತ ಚಿಂತನೆ ಎಲ್ಲವನ್ನು ಒಳಗೊಂಡ ವಿಶ್ವೇಶ್ವರಯ್ಯನವರ ಸಾಧನೆಯು ಯಶಸ್ಸಿನಲ್ಲಿ ಉನ್ನತ ಮಟ್ಟಕ್ಕೆ ಏರಿದೆ ಎಂದು ಇದರಿಂದ ತಿಳಿಯಬಹುದು

ಒಟ್ಟರೆಯಾಗಿ ಲೇಖಕರು ಬರೆದಿರುವ ಲಲಿತ ಪ್ರಬಂಧಗಳಲ್ಲಿ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಯನ್ನು ತನ್ನ ಪ್ರಬಂದಗಳಲ್ಲಿ ಬಂಧಿಸಿರುವುದನ್ನು ಕಾಣಬಹುದಾಗಿದೆ. ಹೀಗೆ ಲೇಖಕರು ತಮ್ಮ ಬರಹ ಮೂಲಕ ಚಿಂತನಾಲಹರಿಯನ್ನು ಹರಿಸಿದ್ದಾರೆ. ತನ್ನ ಕೈ ಬರಹದ ಮೂಲಕ ಅಪಾದವಾದ ಫಣಿಯನ್ನು ಒಳಗೊಂಡ ಪ್ರಬಂಧಗಳ ರಚನೆಯಲ್ಲಿ ವೈಚಾರಿಕ ರೀತಿಯಲ್ಲಿ ನಿಲುವನ್ನು

ಕಂಡುಕೊಂಡಿರುವರು ಲೇಖಕರು ತಮ್ಮ ಮಹತ್ವದ ಕಾಣಿಕೆಯನ್ನು ಇವುಗಳ ಮೂಲಕ ಹಂಚಿಕೊಂಡಿರುವುದನ್ನು ಕಾಣಬಹುದು.

ಲೇಖಕರು ಬರೆದಿರುವ ಪ್ರಬಂಧಗಳಲ್ಲಿ ಹೀಗೆ ಅನಿಸಿಕೆಗಳನ್ನು ಮನಬಿಚ್ಚಿ ಹಂಚಿಕೊಂಡು ಬಂದಿರುವರು ಎಂದು ತಿಳಿಯಬಹುದು ಲೇಖಕರು ತಮ್ಮ ಮನದಾಳದ ಮಾತುಗಳನ್ನು ಬರಹಗಳ ರೂಪದಲ್ಲಿ ಹಂತ ಹಂತವಾಗಿ ವಿಮರ್ಶಿಸುತ್ತಾ ಬಂದಿರುವರು ಅವರ ಯೋಚನೆಗಳು ಆಳವಾಗಿದ್ದು ಆಲೋಚನೆಯು ಸಮಗ್ರತೆಯಿಂದ ಕೂಡಿದ್ದು ಎಂಬುದಾಗಿ ತಿಳಿಯಬಹುದು ಇದರಿಂದಲೇ ಲೇಖಕರ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಯನ್ನು ವಿವರವಾಗಿ ತಿಳಿಯಲಾಗಿದೆ.

**ಉಪಸಂಹಾರ :**

ಲೇಖಕರು ಸ್ವಪ್ರತಿಭೆಯಿಂದ ತನ್ನದೆ ಸಾಹಿತ್ಯದ ದೃಷ್ಟಿಯಿಂದ ಲಲಿತ ಪ್ರಬಂಧಗಳನ್ನು ರಚಿಸಿ ಕನ್ನಡ ಸಾಹಿತ್ಯ ಲೋಕದಲ್ಲಿ ತನ್ನ ಹೆಸರನ್ನು ಅಜರಾಮರವನ್ನಾಗಿ ಮಾಡಿದ್ದಾರೆ. ಲೇಖಕರು ತನ್ನ ಪ್ರಬಂಧಗಳಲ್ಲಿ ತನ್ನದೆ ಆದ ಸ್ವಶಕ್ತಿಯಿಂದ ವೈಚಾರಿಕ ಮನೋಭಾವನೆ ಯನ್ನು ಬೆಳೆಸಿಕೊಂಡಿರುವುದನ್ನು ಕಾಣಬಹುದಾಗಿದೆ. ಹಾಗೂ ತನ್ನ ವಿಚಾರಧಾರೆಯ ದೃಷ್ಟಿಯಿಂದ ಅತ್ಯಮೂಲ್ಯವಾಗಿ ಪ್ರಬಂಧಗಳನ್ನು ರಚಿಸಿ ಅವುಗಳನ್ನು ತನ್ನ ಸಾಹಿತ್ಯದ ಸೆಲೆಯಲ್ಲಿ ಬಂಧಿಸಿದ್ದಾರೆ. ಇವರ ವೈಚಾರಿಕ ಚಿಂತನೆ ಆಲೋಚನಾದೃಷ್ಠಿ ವಿಚಾರ ಮಂಥನ ಅನುಭವ ಪದಗಳ ಸಂಪತ್ತು ಇವುಗಳೆಲ್ಲವನ್ನು ಬಳಸಿಕೊಂಡು ತನ್ನ ಪ್ರಬಂಧಗಳಲ್ಲಿ ಅವುಗಳನ್ನು ವಸ್ತುಗಳ ರೂಪದಲ್ಲಿ ಭಾಷೆಗಳ ಮೂಲಕ ಹಾಸ್ಯ ದೃಷ್ಠಿ ತಂತ್ರಗಾರಿಕೆ ಗಾಂಭಿರ್ಯ ಸಾಮಾಜಿಕ ಪ್ರಜ್ಞೇಯನ್ನು ತನ್ನ ಪ್ರಬಂಧದಲ್ಲಿ ಕಂಡುಕೊಂಡವರಾಗಿದ್ದಾರೆ. ಲೇಖಕರು ತನ್ನ ಬರಹವಣಿಯ ಮೂಲಕ ಸಾಹಿತ್ಯದ ಲೋಕದಲ್ಲಿ ವಿರಮಿಸಿದ್ದಾರೆ. ಅಲ್ಲಿ ಪ್ರಭಾತ್ವವನ್ನು ಮೆರೆಯಲು ಪ್ರಬಂಧಗಳು ದಾರಿಯಾಗಿರುವುದನ್ನು ಕಾಣಬಹದಾಗಿದೆ. ಹೀಗೆ ಲೇಖಕರು ತನ್ನದೆ ಆದ ವಿಚಾರ ಮಂಥನದಿಂದ ಸಾಹಿತ್ಯದ ಸೊಬಗಿನಿಂದ ಅಪಾರ ಜ್ಞಾನವನ್ನುಳ್ಳವರಾಗಿದ್ದರೂ ಇದ್ದರಿಂದ ಅವರ ವೈಚಾರಿಕ ಬರಹಗಳು ಬದುಕುನಲ್ಲಿ ನಡೆದ ಬರಹವಣಿಗೆಯು ಇವರು ಮೂಲಕ ಹರಿದು ಬಂದು ಇವರ ವೈಜ್ಞಾನಿಕ ದೃಷ್ಟಿಕೋನ ಚಿಂತನೆ ವೈಶಿಷ್ಯತೆ ಯನ್ನು ಒಳಗೊಂಡಂತೆ ಇವರು ಸಾಧನೆಯು ಅತ್ಯಂತ ಸೊಬಗನ್ನು ತಂದವೂ ಸಹ ಆಗಿದೆ. ಇವರು ಕನ್ನಡ ಸಾಹಿತ್ಯದ ಚತುರುತೆಯಿಂದ ಗುರುತಿಸಿಕೊಂಡು ತನ್ನದೆ ಸ್ಥಾನವನ್ನು ಭದ್ರಪಡಿಸಿಕೊಂಡಿರುವರು ಎಂದು ತಿಳಿಯಬಹುದಾಗಿದೆ.

ಈ ಅಧ್ಯಾಯದಲ್ಲಿ ಲೇಖಕರು ಹೇಳುವ ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿವುಳ್ಳವು ಎಂದು ತಿಳಿಯಲು ಸಹಾಯವಾಗಲು ಹೆಚ್ಚಿನ ರೀತಿಯಲ್ಲಿ ಸಹಾಯವಾಗಿದೆ. ಎಂದು ತಿಳಿಯಬಹುದು.

ಅಧ್ಯಾಯ:5

## ಎ.ಎನ್.ಮೂರ್ತಿರಾವ್ ಅವರ ಲಲಿತ ಪ್ರಬಂಧಗಳ ವೈಶಿಷ್ಟ್ಯಗಳು:

ಲೇಖಕರು ಬರೆದಿರುವ ಪ್ರಬಂದಗಳಲ್ಲಿ ವೈಶಿಷ್ಟ್ಯಗಳನ್ನು ಕಾಣಬಹುದಾಗಿದೆ. ಲೇಖಕರು ವಿಶೇಷತೆಯನ್ನು ವುಳ್ಳವರಾಗಿದ್ದರು. ತನ್ನ ಬದುಕಿನಲ್ಲಿ ಆದಂತಹ ಅನುಬವಗಳನ್ನು ಪ್ರಬಂದಗಳ ರೀತಿಯಲ್ಲಿ ಸೊಗಸಾಗಿ ಬರೆದಿರುವುದನ್ನು ಕಾಣಬಹುದಾಗಿದೆ. ಅವುಗಳನ್ನು ಹಂತ ಹಂತವಾಗಿ ಬರೆದಿರುವುದನ್ನು ಸಹ ಕಾಣಬಹುದಾಗಿದೆ.

ಲೇಖಕರು ಲಿಖಿತ ಪ್ರಬಂದಗಳಲ್ಲಿ ವಿಶೇಷತೆಯನ್ನು ಬಲ್ಲವರಾಗಿದ್ದರು ಅವರು ಬರೆದಂತಹ ಪ್ರಬಂಧಗಳು ಅತ್ಯಂತ ಸುಂದರವಾಗಿದ್ದವು. ಲೇಖಕರು ಅವರ ವ್ಯಕ್ತಿತ್ವವನ್ನು ಹೆಚ್ಚುಗಾರಿಕೆಯನ್ನಾಗಿ ಮಾಡುವಂತಹದು. ಲೇಖಕರ ವಿಶೇಷತೆ ಎಂದರೆ ಅದು ಈ ಲಲಿತ ಪ್ರಬಂದಗಳಲ್ಲಿ ಯಾವ ರೀತಿ ಇರುವುದು ಅದು ಭಾಷೆ ವಸ್ತು ಹಾಸ್ಯ ತಂತ್ರ ಗಾಂಭೀರ್ಯವನ್ನು ಒಳಗೊಂಡಿದೆ ಎಂದು ತಿಳಿಯಬಹುದಾಗಿದೆ. ಅದಕ್ಕೆ ಕೆಲವು ಉದಾಹರಣೆ ಎಂದರೆ

ಲೇಖಕರು ಬರೆದಿರುವ 'ಹೂವುಗಳು' ಎಂಬ ಪ್ರಬಂಧದಲ್ಲಿ ಹೂವುಗಳ ವೈಶಿಷ್ಟ್ಯಗಳನ್ನು ತಿಳಿದುಕೊಳ್ಳಬಹುದಾಗಿದೆ. ಹೂವುಗಳ ಮಕರಂದದ ಸೊಬಗು ಸೌಂದರ್ಯ ರಮಣೀಯತೆ ಇವುಗಳೆಲ್ಲ ಹೂವಿನ ಮುಖಗಳು ಎಂದರೆ ತಪ್ಪಾಗಲಾರದು. ಹೂವುಗಳನ್ನು ಲೇಖಕರು ಹೇಳುವ ಹಾಗೆ ಎಲ್ಲ ಶುಭ ಕಾರ್ಯಕ್ರಮಕ್ಕೆ ಬಳಸುವರು, ಸಭೆ ಸಮಾರಂಭಗಳಿಗೆ ಸಹ ಬಳಸುವುದರಿಂದ ಇದರ ವೈಶಿಷ್ಟೈತೆಯ ಚೆಲುವನ್ನು ಕಾಣಬಹುದಾಗಿದೆ. ಹೂವಿನ ಗುಣವೆಂದರೆ ಇರುವವರೆಗು ಅದರ ಸ್ವಾದ ಸುಂದರವಾಗಿರುತ್ತದೆ, ನಂತರ ಬಾಡುವುದರಿಂದ ಅದರ ಆಯಸ್ಸು ಮುಗಿಯುವುದನ್ನು ಕಾಣಬಹುದು. ಪೂಜಾ ಕಾರ್ಯಕ್ರಮಕ್ಕೆ ವಿವಿಧ ರೀತಿಯ ಹೂವುಗಳ ಅಲಂಕಾರ ಮಾಡಿ ಸುಂದರ ಸೊಬಗಿನ ರೀತಿಯಲ್ಲಿ ಅಲ್ಲಿ ವರ್ಣರಂಜನೆಯನ್ನು ಸವಿಯಲು ಇದು ಸಾವಕಾಶ ಮಾಡಿಕೊಡುತ್ತದೆ. ಇದರ ಸೊಬಗಿನಿಂದ ಕಂಗೊಳಿಸುತ್ತದೆ ಎಂದು ತಿಳಿಯಬಹುದು.

ಲೇಖಕರು ಇಲ್ಲಿ ಹೂವುಗಳನ್ನು ಆಕಾಶದ ನಕ್ಷತ್ರಗಳಿಗೆ ಹೋಲಿಕೆ ಮಾಡಿರುವರು ಅವು ಅಜರಾಮರ ಆದರೆ ಹೂವುಗಳು ಅಲ್ಪಾಯಸ್ಸು ಹೊಂದ್ದಿದ್ದರು ವರ್ಣನೆಯಲ್ಲಿ ಶೃಂಗಾರಮಯ ಎನ್ನಲಾಗಿದೆ. ಹೂವುಗಳಿಗೆ ಒಂದು ದಿನ ಒಂದು ಸಹಸ್ರಮಾನವಿದ್ದಂತೆ ಎಂದು ಲೇಖಕರು ಹೇಳಿರುವರು. ಇದರಿಂದ ಅದರ ಗುಣವು ವೈಶಿಷ್ಟ್ಯತೆಯಿಂದ ಕೂಡಿರುವುದು. ಹೂವುಗಳಲ್ಲಿ ಸಾವಿರಾರು ಜಾತಿ ಹೂವುಗಳಿವೆ. ಭಾರತೀಯ ಸಂಸ್ಕೃತಿಯ ಪ್ರಮುಖ ಹೂವುಗಳೆಂದರೆ ಕಮಲ. ಗುಲಾಬಿ. ಮಲ್ಲಿಗೆ. ಜಾಜಿ. ಸಂಪಿಗೆ ಹೀಗೆ ಇರುವವು. ಇವುಗಳ ಕಂಪು ಮಕರಂದ. ಸೊಬಗು. ಸೌಂದರ್ಯ. ನಮ್ರತೆ. ಸೌಜನ್ಯ ಪರಿಮಳ ಸುವಾಸನೆಯು ಅತ್ಯಮೂಲ್ಯವಾದುದು.

ಹೂವುಗಳಲ್ಲಿ ಗುಲಾಬಿ ಹೂ ಅತ್ಯಂತ ಶ್ರೇಷ್ಟ ಎಂದು ತಿಳಿದಿರುವರು. 'ಹೂವುಗಳ ರಾಣಿ ಗುಲಾಬಿ' ಎಂದು ತಿಳಿಯಬಹುದು. ಹೀಗೆ ಒಟ್ಟಾರೆಯಾಗಿ ಲೇಖಕರು ಬರೆದಿರುವ ಪ್ರಬಂದವಾದ ಹೂವುಗಳಲ್ಲಿ ಅದರ ವ್ಯಶಿಷ್ಟ್ಯವನ್ನು ಮತ್ತು ಗುಣವನ್ನು ತಿಳಿಯಬಹುದು. ಇದರಿಂದ ಹೂವುಗಳು ಎಷ್ಟು ಅತ್ಯಮೂಲ್ಯವಾದುದು ಎಂದು ತಿಳಿಯಲಾಗಿದೆ.

ಲೇಖಕರು ಬರೆದಿರುವ 'ಹಗಲುಗನಸುಗಳು' ಪ್ರಬಂದದಲ್ಲಿಯೂ ಸಹ ಹಗಲುಗನಸುಗಳ ಮಹತ್ವ ಪಡೆಯಬಹುದು. ಕನಸಿನಲ್ಲಿ ಸನ್ನಿವೇಶದ ನಿರ್ಮಾಣವು ಸಹ ಆಗುವುದು. ಲೇಖಕರು ಹೇಳುವಹಾಗೆ ಹಗಲುಗನಸು ಕಾಣುವುದರಿಂದ ನಮ್ಮ ಆಸೆ ಆಕಾಂಕ್ಷೆಗಳು ಕನಸಿನ ರೂಪದಲ್ಲಿ ನೆರವೇರುವುದನ್ನು ಕಾಣಬಹುದು. ಹಗಲುಗನಸುಗಳಿಂದ ಒಂದು ಕಾಲ್ಪನಿಕ ಪ್ರಪಂಚವನ್ನು ಕಾಣಬಹುದು ಒಮ್ಮೆ ಲೇಖಕರು ಸಹ

ಮಿತ್ರರು ಕೊಟ್ಟ ಪುಸ್ತಕ 'ಅರೇಬಿಯನ್ ನೈಟ್ಸ್' ಓದುತ್ತ ಯಾವುದೋ ಪ್ರಪಂಚಕ್ಕೆ ಹೋಗಿ ವಿರಮಿಸುತ್ತಿದ್ದರು ಎಂಬ ಕನಸು ಅವರಿಗೆ ಬಿದ್ದಿತು ಎಂದು ತಿಳಿಯಬಹುದು. ಇಂತಹ ಕನಸುಗಳು ಬೀಳುವುದರಿಂದ ಇವರುಗಳು ಸುಖಿಗಳು ಎಂದು ತಿಳಿಯಬಹುದು. ಸುಂದರ ಹಗಲುಗನಸು ಬೀಳುವುದರಿಂದ ರಮಣೀಯ ಪ್ರಪಂಚಕ್ಕೆ ಹೋಗುವರು ಎನ್ನಲಾಗಿದೆ. ಇಂತಹ ಕನಸುಗಳ ಮೂಲಕ ವೈವಿದ್ಯಮಯವಾದ ನೆನಪನ್ನು ಕಾಣಬಹುದು ಕನಸಿನಲ್ಲಿ ಗೆಳೆಯರೊಡನೆ ಸಂದರ್ಭ. ಪ್ರೇಯಸಿಯ ನೆನಪು. ಕುಟುಂಬದ ಮಮತೆಯ ಮೆಲುಕು. ಸಂಬಂಧಗಳ ಸಂಕೋಲೆ ಹೀಗೆ ನಾನ ರೀತಿಯಲ್ಲಿ ಬಯಕೆಗಳು ಹಲವಾರು ಸನ್ನಿವೇಶಗಳನ್ನು ಕಾಣಬಹುದು. ಹಗಲುಗನಸುಗಳು ಬೀಳುವುದರಿಂದ ಅವನಂತ ಸುಖಿ ಮತ್ತೊಬನಿಲ್ಲ. ಹಗಲುಗನಸು ಮಹತ್ವವು ವಿಶೇಷತೆಯನ್ನು ಕಾಣಬಹುದು.

ಹೀಗೆ ಲೇಖಕರು ಬರೆದಿರುವ ಹಗಲುಗನಸುಗಳಲ್ಲಿ ಕನಸುಗಳ ಸನ್ನಿವೇಶವು ಸುಂದರ ರೀತಿಯಲ್ಲಿ ವರ್ಣನೆಯಿಂದ ಮೂಡಿ ಬಂದಿದೆ ಎಂದು ತಿಳಿಯಬಹುದು.

ಲೇಖಕರು ಬರೆದಿರುವ ಪ್ರಬಂದವಾದ 'ಗಾಡಿಯ ಪ್ರಯಾಣ' ದಲ್ಲಿ ವೈಶಿಷ್ಟ್ಯವನ್ನು ಕಾಣಬಹುದು. ಸ್ವತಃ ಲೇಖಕರೆ ಅನುಬವಿಸಿರುವ ಗಾಡಿಯ ಪ್ರಯಾಣದ ಮೆಲುಕನ್ನು ಹಂಚಿಕೊಂಡಿರುವರು. ಲೇಖಕರು ಮೈಸೂರಿನಿಂದ ಅವರ ಊರಿಗೆ ಹೋಗಬೇಕಾದರೆ ಎತ್ತಿನ ಗಾಡಿಯೊಂದಿಗೆ ರಾತ್ರಿಯ ಪ್ರಯಾಣದ ಅನುಭವವನ್ನು ಕಂಡವರಾಗಿದ್ದರು. ಲೇಖಕರಿಗೆ ಗೆಜ್ಜೆಯ ಶಬ್ದ. ಕೊರಳಿನ ನಿನಾದ ಇವುಗಳು ಸೊಬಗನ್ನು ನೀಡಿರುವವು. ಚಂದ್ರಮನ ಬೆಳಕಿನಲ್ಲಿ ತಂಗಾಳಿಯಲ್ಲಿ ಪ್ರಯಾಣದ ಅನಿಸಿಕೆ. ಅಭಿಪ್ರಾಯವು ಅತ್ಯಮೂಲ್ಯವಾದದ್ದು. ಆಕಾಶದ ನಕ್ಷತ್ರ ಅವುಗಳ ವರ್ಣನೆ ಜೊತೆಗೆ ಹಲವಾರು ಗಾಡಿಯು ಇದ್ದರೆ ಇನ್ನು ಸುಂದರವೆಂದು ಹೇಳುವರು.

ಲೇಖಕರು ಗಾಡಿಯ ಪ್ರಯಾಣದೊಂದಿಗೆ ತಾಳ್ಮೆ ನಿದಾನತೆಯನ್ನು ಕಾಣಬಹುದು. ಇದರಲ್ಲಿ ಆತುರತೆ ಇಲ್ಲ ಪ್ರಯಾಣ ಸುಸೂತ್ರ, ಉತ್ಸಾಹ ಹರುಷ ನೀಡುವುದು. ಸಂಬ್ರಮ ತರುವುದು. ರಾತ್ರಿಯ ಸಂಚಾರ ಎಲ್ಲವು ಅತ್ಯಂತ ರೋಮಾಂಚನವಾದುದು. ಇದು ಒಂದು ರೀತಿಯ ಸನ್ನಿವೇಶದ ನಿರ್ಮಾಣವು ಹೌದು. ಲೇಖಕರ ವೈಶಿಷ್ಟ್ಯತೆಗೆ ಈ ಪ್ರಬಂದವು ಸಾಕ್ಷಿ ಎಂದು ತಿಳಿಯಬಹುದು.

ಲೇಖಕರು ಬರೆದಿರುವ ಮತ್ತೊಂದು ಪ್ರಬಂದವಾದ 'ಹೋಟಲುಗಳು' ಈ ಪ್ರಬಂದದಲ್ಲಿಯ ಮಾಣಿಯ ಗುಣದರ್ಮ ಹೋಟಲ್‌ನ ವಿಶೇಷತೆ ಆಕರ್ಷಣೆ ಸೌಂದರ್ಯತೆ ಸೊಬಗು ಇವುಗಳು ವೈಶಿಷ್ಟ್ಯ ಗುಣಗಳನ್ನು ಹೊಂದಿದೆ ಎನ್ನಲಾಗಿದೆ. ಮೊದಲಿಗೆ ಹೋಟೆಲ್‌ನ ಸೌಂದರ್ಯವನ್ನು ನೋಡಬಹುದು. ಅದು ವರ್ಣಕೃತಿಗಳು ರವಿವರ್ಮನ ಕೃತಿಗಳು ರಾಜ ಮನೆತನದ ಕೃತಿಗಳು. ಇವುಗಳಿಂದ ಕೂಡಿರುತ್ತವೆ ಮತ್ತು ಅಗರಬತ್ತಿಯ ಸುಗಂದದಿಂದ ಎಲ್ಲರನ್ನು ಆಹ್ವಾನಿಸುತ್ತದೆ. ಒಮ್ಮೆಯಾದರು ಬರುವಂತೆ ಇದು ಕೈ ಬೀಸಿ ಕರೆಯುತ್ತಿರುತ್ತದೆ ಮತ್ತು ಹೋಟಲ್‌ಗಳಲ್ಲು ವಿಶೇಷತೆಯನ್ನು ಕಾಣಬಹುದು 'ಕೋಮಲ ವಿಲಾಸ' 'ಆನಂದ ವಿಲಾಸ' 'ಆನಂದ ಭವನ' 'ಉಡುಪಿ ಭವನ' 'ಹಳ್ಳಿ ಮನೆ' ಹೀಗೆ ನಾನ ರೀತಿಯಲ್ಲಿ ವಿಶೇಷತೆಯನ್ನು ಹೊಂದಿದೆ. ಮತ್ತು ಇಲ್ಲಿ ಕಾಯಕ ಮಾಡುವ ಮಾಣಿಯ ಗುಣದರ್ಮ ವಿಶಿಷ್ಟತೆಯು ಸಹ ಎಲ್ಲರನ್ನು ಅಹ್ವಾನಿಸುತ್ತದೆ. ಹೋಟೆಲ್‌ನ ಸಿಗುವ ತಿಂಡಿಗಳ ಶ್ರೇಷ್ಟತೆಯ ಜೊತೆಗೆ ಮಾಣಿಯ ಮಾತುಗಾರಿಕೆಯಿಂದ ಅದರೆ ಸೊಬಗು ಇಮ್ಮಡಿಯಾಗುತ್ತದೆ. ಇಲ್ಲಿ ಸಿಗುವ ಬಾದುಶ. ಸೊನಾ ಪಾಪಡ್. ಗುಲಾಬ್ ಜಾಮುನ್. ಮೈಸೂರ್ ಪಾಕ್. ಹೊಯ್‌ಗಡುಬು. ಬಾಳೆ ಕಾಯಿ ಬೋಂಡ ಹೀಗೆ ವಿವಿಧ ರೀತಿಯಲ್ಲಿ ಸಿಗುವುದು ಮತ್ತು ಇವುಗಳನ್ನು ಮಾಣಿಯು ತನ್ನ ಶೈಲಿಯಲ್ಲಿ ಬಹುಬೇಗ ತಿಳಿಸುವುದು. ಇವುಗಳು ಸಹ ವಿಶೇಷತೆಯನ್ನು ಪಡೆದಿವೆ ಎನ್ನಲಾಗಿದೆ. ಹೋಟಲ್‌ನ ರುಚಿಯು ಮಹತ್ವ ಪಡೆದಿರುತ್ತದ್ದೆ. ಗುಣ ವಿಶೇಷತೆಯನ್ನು ಇಲ್ಲಿ ಕಾಣಬಹುದು. ಲೇಖಕರು ಹೇಳುವಂತೆ ಸಿಹಿ ತಿಂಡಿಗೆ ಬೊಂಬಾಯಿಯ ಆನಂದ ಭವನ. ಖಾರ ತಿಂಡಿಗೆ ಸಂತೆ ಪೇಟೆಯ ಹೋಟೆಲ್. ಮೈಸೂರು ಸಾದಾ ದೋಸೆಗೆ ಹಳ್ಳದ ಕೇರಿಯ ಸೊಟ್ಟ ಮೂತಿಯ ಸುಬ್ಬರಾಯರ ಹೋಟಲ್ ಎಂದು ತಿಳಿಯಬಹುದು. ಹೋಟೆಲ್ ನಲ್ಲಿ ಮಾಣಿಯ ಯೋಗ್ಯತೆ ಮಾಣಿಯ ಸಲಹೆ ಅಗತ್ಯವಾದುದು. ಮತ್ತು 'ಮಾಣಿ' ಇಲ್ಲದ್ದಿದರೆ ಮುಖ್ಯ ಅಂಗವೇ ಊನವಾದಂತೆ ಎಂದು

ತಿಳಿಯಬಹುದು. ತಿಂಡಿಗಳ ಪಟ್ಟಿಯನ್ನು ಮಾಣಿಯು ಪಟಾಪಟ್ ಅಂತ ಹೇಳುವನು ಇದರಿಂದ ಮಾಣಿಯ ನೆನಪು ಅಗಾಧವಾದುದು ಎನ್ನಲಾಗಿದೆ ಮಾಣಿಯು ಕೊಡುವ ಸಲಹೆಯು ಸಹ ಇದು ಈಗ ಮಾಡಿದ್ದು ಬಿಸಿಯಾಗಿದೆ ಇದನ್ನ ತಗೊಳ್ಳಿ ಎಂದು ಹೇಳುವ ಕಾಯಕ ಅತ್ಯಮೂಲ್ಯವಾದುದು ಎಂದು ತಿಳಿಯಬಹುದು. ಇದು ವಿಶೇಷಗುಣಧರ್ಮವನ್ನು ಹೊಂದಿದೆ ಎನ್ನಲಾಗಿದೆ.

ಲೇಖಕರು ಬರೆದಿರುವ 'ಮಹಾರಾಜ ಕಾಲೇಜಿನ ಕಾಮನ್ ರೂಮ್' ಎಂಬ ಪ್ರಬಂದದಲ್ಲಿ ವಿಶೇಷತೆಯನ್ನು ಒಳಗೊಂಡ ವಿಶಿಷ್ಟ್ಯತೆಯನ್ನು ಕಾಣಬಹುದು ಇದರಲ್ಲಿ ಗಾಂಭಿರ್ಯ, ಹಾಸ್ಯ, ಭಾಷೆ, ಸನ್ನಿವೇಶ ನಿರ್ಮಾಣ ಎಲ್ಲವನ್ನು ಲೇಖಕರು ಸ್ವತಃ ಹಂಚಿಕೊಂಡಿದ್ದಾರೆ. ಇಲ್ಲಿ ಅವರು ಹಳೆಯ ನೆನಪು ಮೆಲುಕು ಹಾಕಿರುವರು.

ಗಾಂಭಿರ್ಯಕ್ಕೆ ಇಲ್ಲಿರುವ ಸವಿನೆನಪುಗಳನ್ನು ಕಾಣಬಹುದು. ಇಲ್ಲಿ ಮುಖ್ಯ ಉಪಧ್ಯಾಯರು ದರಿಸುವ ವಸ್ತ್ರವು ವಿದ್ಯಾರ್ಥಿಗಳ ಮೇಲೆ ಗಾಂಭೀರ್ಯವನ್ನು ಬೀರುತಿತ್ತು. ವಿದಾರ್ಥಿಗಳಿಗೆ ಮುಖ್ಯ ಉಪಧ್ಯಾಯರುಗಳು ಎಲ್ಲಿಂದಲೋ ಬಂದವರು ಎಂಬ ಘನತೆಯು ಸಲ್ಲುತಿತ್ತು. ಗಂಬೀರತೆಯು ದೊರಕುತಿತ್ತು. ಕೆಲವೊಂದು ವಿದ್ಯಾರ್ಥಿಗಳು ಇವರನ್ನು ಅನುಕರಣೆ ಮಾಡುತ್ತಿದ್ದರು ಎಂದು ತಿಳಿಯಬಹುದು. ಮಹಾರಾಜ ಕಾಲೇಜಿನಲ್ಲಿ ಆಗಿನ ಸಂದರ್ಭದಲ್ಲಿ ವಿದ್ಯಾರ್ಥಿಗಳನ್ನು ಕಂಡರೆ ಘನತೆ ಗೌರವವಿತ್ತು ಅಧ್ಯಾಪಕರನ್ನು ಕಂಡರೆ ವಿಧ್ಯಾರ್ಥಿಗಳಿಗು ಸಹ ಭಕ್ತಿ ಗೌರವ ಶ್ರದ್ದೆ ಗಾಂಭೀರ್ಯ ನಮನ ಎಲ್ಲವನ್ನು ವಿದ್ಯಾರ್ಥಿ ವೃಂದವೂ ಸಲ್ಲಿಸುತ್ತಿತ್ತು. ಎಂಬುದನ್ನು ತಿಳಿಯಬಹುದು. ಅಧ್ಯಾಪಕರು ಸಹ ತನ್ನ ಕಾಯಕವನ್ನು ಅತ್ಯಂತ ಹೆಚ್ಚಿನ ರೀತಿಯಲ್ಲಿ ಶ್ರಮಿಸುತ್ತಿದ್ದರು. ಇವರು ತಮ್ಮ ಘನತೆಗೆ ದಕ್ಕೆ ಬರದ ರೀತಿಯಲ್ಲಿ ಕಾಯಕ ಮುಂದುವರಿಸುತ್ತಿದ್ದರು ಎಂದು ತಿಳಿಯಬಹುದು. ಲೇಖಕರು ಹೇಳುವ ಹಾಗೆ ಅವರು ಇದ್ದಂತ ಸಂದರ್ಭದಲ್ಲಿ ಹಾಸ್ಯದ ಹೊನಲು ಕಂಡವರಾಗಿದ್ದರು. ಒಮ್ಮೆ ಸುಬ್ಬರಾಯರು ಮಧ್ಯಾಹ್ನ ಸಮಯದಲ್ಲಿ ಪರೀಕ್ಷೆಗಳು ನಡೆಯುವ ಸಂದರ್ಭದಲ್ಲಿ ಬಿಸಿಲಿನ ಜಳಕಕ್ಕೆ ಅಲಸಿಕೆ ಬರುತ್ತಿತ್ತು. ಅದೇ ಸಂದರ್ಭದಲ್ಲಿ ಪ್ರಿನ್ಸಿಪಾಲರು ರಾಲೋ ಬಂದು ಪ್ರಶ್ನೆ ಪತ್ರಿಕೆಯನ್ನು ಕೊಟ್ಟು ನಿಲ್ಲುವರು. ಸುಬ್ಬರಾಯರಿಗೆ ಬಹಳ ನಾಚಿಕೆಯಾಗುತ್ತದೆ. ತಿಂಡಿಯನ್ನು ಕದಿಯಲು ಮಗುವು ತಾಯಿಯ ಸಿಕ್ಕಿ ಬಿದ್ದ ಮಗುವಿನಂತಿತ್ತು ಅವರ ಮುಖ ಮುದ್ರೆಯನ್ನು ರಾಲೋ ಗಮನಿಸಿಯು ಗಮನಿಸದಂತೆ ಚೇಷ್ಟೆಯ ನಗುವನ್ನು ನಕ್ಕುವರು ಎಂಬ ಸಂದರ್ಭವನ್ನು ಕಾಣಬಹುದು.

ಲೇಖಕರು ಹೇಳುವಹಾಗೆ ತತ್ವ ಶಾಸ್ತ್ರದ ಪ್ರಾದ್ಯಾಪಕರು ಸುಚೇಷ್ಟೆಯಲ್ಲಿ ಇವರೆಲ್ಲರಿಗಿಂತ ಒಂದು ಕೈ ಮೇಲು. ಪ್ರೊಫೆಸರ್ ರಾದಕೃಷ್ಣನ್ ಅವರ ತರಗತಿಯಲ್ಲಿಯೂ ಪಾಠ ಆರಂಭವಾಗುವುದಕ್ಕೆ ಮೊದಲು ಹತ್ತು ಹದಿನೈದು ವಿದ್ಯಾರ್ಥಿಗಳನ್ನು ಮಾತನಾಡಿಸಿ ಕೀಟಲೆ ಮಾಡಿ ನಗಿಸುತ್ತಿದ್ದರು. ಆಗ ಗುರುಶಿಷರ್ಯರು ಕಾಫಿ ಒಳ್ಳೆಯದೋ ಟೀ ಒಳ್ಳೆಯದೋ. ಅವರಂತೆ ಎಲ್ಲರು ನಿಲುವಂಗಿ ಹಾಕಿಕೊಂಡರೆ ಚೆನ್ನಾಗಿರುತ್ತದೆ. ಇಂತ ನೂರು ಪ್ರಶ್ನೆಗಳು ನೆಡೆಯುತ್ತಿತು. ಇದು ಹಾಸ್ಯದ ಹೊನಲಿನಿಂದ ಎಲ್ಲರು ತೇಲುತ್ತಿದ್ದರು.

ಲೇಖಕರು ಹೇಳುವ ಹಾಗೆ ಹೊಸಬರು ಅಧ್ಯಾಪಕರು ಬಂದರೆ ಕಾಮನ್ ರೂಮಿನಲ್ಲಿ ಅವರಿಗೆ ಹಳಬರಿಂದ ಅದ್ದೂರಿ ಸ್ವಾಗತ. ಅವರಿಗೆ ಕಾಫಿ ತಿಂಡಿ ತರಿಸಿ ಕೊಟ್ಟು ಅವರ ರೂಪ ಬಟ್ಟೆ ಬರೆಗಳು ನಡಿಗೆಯ ವೈಖರಿ ಎಲ್ಲವನ್ನು ಮನ ಬಂದಂತೆ ಅಣಕಿಸಿಕೊಂದು ಹಾಸ್ಯದಲ್ಲಿ ತೇಲುವರು. ಒಮ್ಮೆ ಕಾಮನ್ ರೂಮಿನಲ್ಲೆಲ್ಲಾ ಬಹುಮಟ್ಟಿಗೆ ಕ್ರಾಪು ತಲೆ ಒಬ್ಬರು ಕನ್ನಡ ಶಾಖೆಗೆ ಸೇರಿದವರು. ಕ್ರಾಪು ಬಿಡಲು ಹಿಂಜರಿದಾಗ ನಾಲ್ಕು ಜನ ಸದಸ್ಯರು ಅವರ ಕೈ ಕಾಲುಗಳನ್ನು ಕಟ್ಟಿ ಹಿಡಿದು ಐದನೆಯವರು ಅವರು ಜುಟ್ಟು ಕತ್ತರಿಸಿದ ಪ್ರಸಂಗವು ನಡೆದುದುಂಟು ಎಂದು ತಿಳಿಯಬಹುದು. ಆಗ ಇದು ಇಲ್ಲಿಯ ವೈಶಿಷ್ಟತೆ ಎಂದು ಲೇಖಕರು ಹೇಳುವರು. ಲೇಖಕರು ಹೇಳುವಂತೆ ಇನ್ನೊಂದು ಮಹತ್ವದ ಸಂಗತಿ ಎಂದರೆ ಆಗ ಕಾಲೇಜಿನಲ್ಲಿ ಪ್ರದರ್ಶಿತವಾದ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದರು ನಮ್ಮವರೆ ಪ್ರದರ್ಶನಕ್ಕೆ ಹದಿನೈದು ದಿನ ಮುಂಚೆ ಮುಗಿದ

ಮೇಲೆ ಹದಿನೈದು ದಿನ ಅವರು ಮಾಡಿಲ್ಲದ ಮಾಡಿದ ಮಾಡಬಹುದಾಗಿದ್ದ ಎಲ್ಲವನ್ನು ಲೆಕ್ಕಹಾಕಿ ಹಾಸ್ಯ ಸಾಗರದಲ್ಲಿ ಅದ್ದಿ ತೆಗೆಯುತ್ತಿದ್ದೆವು.

ಒಟ್ಟಾರೆಯಾಗಿ ಲೇಖರು ಹಾಸ್ಯ ನಗೆಯನ್ನು ಸಂತೋಷವನ್ನು ಅಂದು ಕಂಡವರು ಎಂದು ತಿಳಿಯಬಹುದು. ಲೇಖಕರ ವೈಶಿಷ್ಟ್ಯತೆಯನ್ನು ಇದರಲ್ಲಿ ಕಾಣಬಹುದು ಗಾಂಬೀರ್ಯ,ಹಾಸ್ಯ,ಸನ್ನಿವೇಶ,ಬಾಷೆ ನಿರೂಪಣೆಯನ್ನು ಇದರಲ್ಲಿ ಕಾಣಬಹುದು.

ಲೇಖಕರು ಈ ಪ್ರಬಂದದಲ್ಲಿ ಸರಳ ಬಾಷೆಯನ್ನು ಬಳಸಿರುವರು ಹಾಗು ಇಂಗ್ಲೀಷ್ ಸಾಹಿತ್ಯವನ್ನು ಬಲ್ಲವರಾಗಿದ್ದರು ಇದರಿಂದ ಅನೇಕ ಕೃಷಿಗಳನ್ನು ಮಾಡಿರುವುದಾಗಿ ತಿಳಿಯಬಹುದು. ಕನ್ನಡ ಬಾಷೆಯಲ್ಲಿ ನಿಪುಣರಾಗಿದ್ದರು. ಕನ್ನಡ ಬಾಷೆಯನ್ನು ಸುಲಲಿತವಾಗಿ ತಿಳಿದಿದ್ದು ಲಲಿತ ಪ್ರಬಂಧಗಳನ್ನು ಮೌಲ್ಯದ ರೀತಿಯಲ್ಲಿ ಸಂಗ್ರಹಿಸಿರುವರು ಪ್ರಬಂದಗಳ ರಚನೆ ಕಟ್ಟುನಿಟ್ಟು ಆಕಾರತೆ ಕ್ರಮಬದ್ಧ ಬರಹ ಇವೆಲ್ಲವನ್ನು ಬಲ್ಲವರಾಗಿದ್ದು ಲೇಖಕರು ತುಂಬ ಸೊಗಸಾಗಿ ಲಲಿತ ಪ್ರಬಂದಗಳನ್ನು ಬರೆದಿರುವರು. ಲೇಖಕರು ಅಂದು ಸಾಹಿತ್ಯವನ್ನು ಬರೆಯುವ ಸಂದರ್ಭದಲ್ಲಿ ಇಂಗ್ಲೀಷ್ ಮತ್ತು ಸಂಸ್ಕೃತದ ವ್ಯಾಮೋಹದಲ್ಲಿ ಇದ್ದ ಕಾಲ ಅಂತಹ ಸಂದರ್ಬದಲ್ಲಿ ಕನ್ನಡ ತನಕ್ಕೆ ತನ್ನದೇ ಗಟ್ಟಿತನ ತಂದು ಲಲಿತ ಪ್ರಬಂದಗಳ ಮೆರುಗು ನೀಡಿದರು.

ಲೇಖಕರು ಸ್ಪಷ್ಟವಾದ ಸುಲಲಿತವಾದ ತೇಜಸ್ಸಿನ ಬಾಷೆ ಅವರದು ವರ್ಣನೆ ವೃತ್ತಾಂತ ಚಿಂತನೆ ಎಲ್ಲ ಉದ್ದೇಶಗಳನ್ನು ನಿರ್ವಹಿಸಬಲ್ಲ ಹೃದಯವನ್ನು ಮಿಡಿಯಬಲ್ಲ ವಿಚಾರ ಶಕ್ತಿಯನ್ನು ಪ್ರಚೋದಿಸಬಲ್ಲ ಬಾಷೆಯ ಪ್ರಭು ಅವರು ಕನ್ನಡದಲ್ಲಿ ಲಲಿತ ಪ್ರಬಂದಕ್ಕೆ ವಿಶಿಷ್ಟ ರೂಪಕೊಟ್ಟು ಅದರ ಸಾದ್ಯತೆಗಳನ್ನು ತೋರಿಸಿಕೊಟ್ಟ ಅವರು ಲಲಿತ ಪ್ರಬಂದದ ಸಾಮ್ರಾಟರಾಗಿದ್ದಾರೆ.

ಲೇಖಕರು ಬರೆದಿರುವ 'ಹರಟೆ ಮತ್ತು ಪ್ರಬಂದ'ದಲ್ಲಿ ಪ್ರಬಂದದ ವಸ್ತು ಹರತೆ ಮತ್ತು ಪ್ರಬಂದವು ಆಗಿದ್ದು ಇದು ಸಹ ವಿಶೇಷತೆಯನ್ನು ಒಳಗೊಂಡಿದೆ. ಇಲ್ಲಿಯೂ ತಂತ್ರಗಾರಿಗೆಯನ್ನು ಕಾಣಬಹುದಾಗಿದೆ ಹಾಗು ಗಾಂಬಿರ್ಯವನ್ನು ಸಹ ನಾವು ಇಲ್ಲಿ ಕಾಣಬಹುದಾಗಿದೆ. ಇಲ್ಲಿನ ಸಂದರ್ಭದಲ್ಲಿ ಒಂದು ವಸ್ತುವನ್ನು ಇಟ್ಟುಕೊಂಡು ಆಡು ಬಾಷೆಯಲ್ಲಿ ಸರಳವಾಗಿ ಸುಲಲಿತವಾಗಿ ಹಾಸ್ಯದ ರೀತಿಯಲ್ಲಿ ತನ್ನದೇ ಶೈಲಿಯಲ್ಲಿ ಹೇಳುವರು. ಬಾಷೆಯಲ್ಲಿ ಸಹ ಆಸಕ್ತಿಯನ್ನು ಮೂಡಿಸುತ್ತದೆ. ಹರಟೆಯಿಂದ ಎಲ್ಲರನ್ನು ಸೆಳೆಯಲು ಒಂದು ವೇದಿಕೆಯು ಸಿದ್ದಗೊಳ್ಳುತ್ತದೆ. ಪ್ರಬಂದಕ್ಕೆ ಒಂದು ಬಂಧವನ್ನು ಏರ್ಪಟ್ಟಿರುತ್ತದೆ. ಇಲ್ಲಿ ವಿಷಯಗಳ ನಿರ್ದಿಷ್ಟ ಚೌಕಟ್ಟು ಇರುತ್ತದೆ. ಇಲ್ಲಿ ಪದಗಳ ಸ್ತಿರತೆ ಇರುತ್ತದೆ. ಒಂದು ವಿಷಯವನ್ನು ಮನವರಿಕೆಯನ್ನು ಮಾಡುವರು ಆದರೆ ಹರಟೆಯಲ್ಲಿ ಬಂಧವಿರುವುದಿಲ್ಲ. ಅಲ್ಲಿ ವಿಷಯಗಳು ಒಂದು ಇದ್ದರು ಹೋಗುತ್ತ ಅಂದರೆ ಮಾತನಾಡುತ್ತ ಮಾತನಾಡುತ ಸವಿಸ್ತಾರವಾಗಿ ವಿಷಯವು ಯಾವುದೋದಾಟಿಯನ್ನು ಮೀರುತ್ತ ಹೋಗುತ್ತದೆ. ಇಲ್ಲಿಯೂ ಎಲ್ಲ ರೀತಿಯಲ್ಲಿಯೂ ಸೊಬಗು ಸಿಗುತ್ತದೆ. ಉತ್ತರ ಕರ್ನಾಟಕದ ಬಾಷೆಯಲ್ಲಿ ಎಲ್ಲರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಗುತ್ತಾರೆ ಎಂದು ತಿಳಿಯಬಹುದು. ಒಬ್ಬೊಬ್ಬರದು ಒಂದೊಂದು ಬಾಷೆ. ಬಾಷೆಯಲ್ಲಿ ನಾನ ರೀತಿಯ ಬಾಷೆಗಳಿದ್ದು ಬಾಷೆಗಳಮೂಲಕ ಬಾಷೆಯ ತುಲನೆಯಿಂದ ಎಲ್ಲರನ್ನು ಆಕರ್ಷಿತರನ್ನಗಿ ಮಾಡಿ ಮೂಕವಿಸ್ಮಿತರನ್ನಾಗಿ ಮಾಡಿ ಹಾಸ್ಯದ ರಸ ಸಂಜೆಯಲ್ಲಿ ಮೊಳಗಿಸುವರು ಎಂದು ತಿಳಿಯಬಹುದು. ಇಲ್ಲಿಯೂ ಸಹ ಲೇಖಕರು ಹೇಳುವ ಹಾಗೆ ಗಾಂಭೀರ್ಯತೆಯನ್ನು ಒಳಗೊಂಡಿರುತ್ತದೆ ಎಂದು ತಿಳಿಯಬಹುದು. ಹರೆಟೆಯಲ್ಲಿ ಖ್ಯಾತಿಯನ್ನು ಪಡೆದಿರುವ ಕವಿಗಳು ಲೇಖಕರು ಸಾಹಿತಿಗಳು ತನ್ನದೇ ಧಾಟಿಯಲ್ಲಿ ಪದಗಳ ಪುಂಜವನ್ನು ಹರಿಸಿ ರಸದೌತಣವನ್ನು ಸವಿಯಲು ತಯಾರು ಮಾಡಿಕೊಂದು ಸುಂದರ ಸಂಜೆಯೊಂದಿಗೆ ಅದರ ನೆನಪಿನ ಛಾಯೆಯನ್ನು ಮಾತಿನ ಮೂಲಕ ಮಂಟಪವನ್ನು ಕಟ್ಟುವರು. ಹರಟೆಯು ಮತ್ತು ಪ್ರಬಂಧವು ತನ್ನದೇ ದಾಟಿಯಲ್ಲಿ ಜನರನ್ನು ಪದಗಳ ಸಹಿತ್ಯೆದ ರಚನೆಯಿಂದ ಎಲ್ಲರನ್ನು ಆಕರ್ಷಕರನ್ನಾಗಿ ಮಾಡುತ್ತದೆ. ಇಲ್ಲಿ ಹರಟೆಗೆ ನಿರ್ಧಿಷ್ಟ ಗುರಿಯಿಲ್ಲ ಆದರೆ ಪ್ರಬಂದಕ್ಕೆ ಗುರಿಯಿದೆ ಆದರೆ ಎಲ್ಲರು ಪ್ರಬಂಧಕ್ಕೆ ಹರಟೆಯ ಕಟ್ಟೆಯನ್ನು ಅನುಭವಿಸುವುದನ್ನು ಕಾಣುವರು. ಒಟ್ಟಾರೆಯಾಗಿ ಎರಡು ಸಹ ತನ್ನದೇ ಆದ ವಿಶೇಷತೆಯನ್ನು ಪಡೆದುಕೊಂಡು ಖ್ಯಾತಿಯನ್ನು ಪಡೆದಿದೆ.

ಲೇಖಕರು ಬರೆದಿರುವ 'ರೇಡಿಯೋ ನಾಟಕ ಮತ್ತು ರಂಗಭೂಮಿ ನಾಟಕ' ಪ್ರಬಂಧದಲ್ಲಿ ಇವರೆಡು ಯಾವರೀತಿಯಲ್ಲಿ ಪ್ರಭಾವ ಬೀರುತ್ತದೆ, ಎರಡರಲ್ಲಿಯೂ ವೈಶಿಷ್ಟ್ಯವನ್ನು ಕಾಣಬಹುದು. ಹಿಂದಿನ ಕಾಲದಲ್ಲಿ ರೇಡಿಯೋ ನಾಟಕವು ಪ್ರಚಾರದಲ್ಲಿತ್ತು ಅದು ಖ್ಯಾತಿಯನ್ನು ಪಡೆದ್ದಿದ್ದು ಅದು ಶೋತ್ರಗಳಿಗೆ ಪ್ರಿಯವಾಗಿತ್ತು. ರೇಡಿಯೋ ನಾಟಕದಲ್ಲಿ ನೋಡಬಹುದಾದ ರಂಗಸ್ಥಳವಿಲ್ಲ. ವೇಷಭೂಷಣವಿಲ್ಲ. ಪಾತ್ರದಾರಣೆ ಸಂಭಾಷಣೆಗಳೆರಡು ಮಾತ್ರ ಉಳಿದಿವೆ. ರಂಗ ಸ್ಥಳಕ್ಕಾಗಿ ನಾಟಕ ಬರೆಯುವನಿಗೆ ಎರಡು ಇಂದ್ರೀಯಗಳ ಕಣ್ಣಿನ ಮತ್ತು ಕಿವಿಯ ಸಹಾಯ ಸಿಗುತ್ತದೆ. ರೇಡಿಯೋ ನಾಟಕದಲ್ಲಿ ಕಣಿಗೆ ಕೆಸಲವೇನು ಇಲ್ಲ 'ದೇಹದ ಕಣ್ಣಿನಿಂದ ನೋಡಲಾಗದ್ದನ್ನ ಮನಸಿನ ಕಣ್ಣಿನಿಂದಾದರು ನೋಡುವಂತಾಗಬೇಕು' ಈ ಸಮಸ್ಯೆ ರಂಗಭೂಮಿ ನಾಟಕದಲ್ಲಿ ಬರುವುದುಂಟು. ರೇಡಿಯೋದಲ್ಲಿ ವಸ್ತ್ರ ವಿನ್ಯಾಸ ವಿರುವುದಿಲ್ಲ ಇದು ರೇಡಿಯೋ ನಾಟಕದ ವೈಶಿಷ್ಟ್ಯವೆಂದು ತಿಳಿಯಬಹುದು.

ಲೇಖಕರು ಹೇಳುವ ಹಾಗೆ ರಂಗಭೂಮಿ ನಾಟಕದಲ್ಲಿ ಕಣ್ಣು ಮತ್ತು ಕಿವಿಗಳೆರಡು ಕೆಲಸವಿರುತ್ತವೆ. ಈ ರೀತಿಯ ನಾಟಕಗಳು ಕಣ್ಣಿನಿಂದ ಮನಸ್ಸು ತೃಪ್ತಿಯಾಗುವಂತೆ ನೋಡಬಹುದು. ರಂಗಭೂಮಿ ನಾಟಕದಲ್ಲಿ ಪ್ರಮುಖವಾಗಿ ಸಾಮಾಜಿಕ ಮತ್ತು ಪೌರಾಣಿಕ ನಾಟಕಗಳಿರುವುದನ್ನು ತಿಳಿಯಬಹುದು. ಲೇಖಕರು ಹೇಳುವ ಎರಡು ತನ್ನದೆ ಆದ ವಿಶೇಷತೆಯನ್ನು ಒಳಗೊಂಡಿದೆ. ಪೌರಾಣಿಕ ನಾಟಕಗಳು ದುಬಾರಿ ಬೆಲೆಯನ್ನು ಭರಿಸುತ್ತವೆ ಹಾಗು ಪ್ರೇಕ್ಷಕ ವರ್ಗಕ್ಕೆ ಹೆಚ್ಚಿನ ಮನರಂಜನೆ ನೀಡುತ್ತದೆ. ಇತ್ತೀಚಿನ ದಿನಗಳಲ್ಲಿ ಇದರ ಆಸಕ್ತಿಯು ಕ್ರಮೇಣ ಕಡಿಮೆಯಾಗುತ್ತ ಬಂದಿದೆ. ಸಾಮಾಜಿಕ ನಾಟಕ ಮತ್ತು ಪೌರಾಣಿಕ ನಾಟಕಗಳು ತನ್ನದೆ ಅದ ಪ್ರೇಕ್ಷಕ ವೃಂದವನ್ನು ಸೆಳೆದಿರುತ್ತದೆ. ಇವುಗಳ ವಿಶೇಷತೆ ಪದಗಳ ಸ್ಫಷ್ಟತೆಯಿಂದ ಬಂದವರಿಗೆ ಹೊಸ ಅನುಭವವನ್ನು ನೀಡುತ್ತದೆ.

ಲೇಖಕರು ಹೇಳುವಹಾಗೆ ಇತ್ತೀಚಿನ ದಿನಗಳಲ್ಲಿ ರೇಡಿಯೋ ನಾಟಕದಿಂದ ಶಿಕ್ಷಣದ ಬಗ್ಗೆ ಹೆಚ್ಚಿನ ರೀತಿಯಲ್ಲಿ ಪ್ರಸಾರವಾಗುತ್ತ ಬಂದಿದೆ, ಇದರಿಂದ ವಿದ್ಯಾರ್ಥಿಗಳಿಗೆ ಉತ್ತಮ ವಿಚಾರಗಳು ಗುಣಗಳು ಬಾಷೆಯ ಪ್ರಭುತ್ವ ಮಾತೃ ಬಾಷೆಯ ಕಲರವ ಇದರಿಂದ ವಿದ್ಯಾರ್ಥಿಗಳಿಗೆ ಅನುಕೂಲವಾಗುತ್ತದೆ. ಲೇಖಕರು ಹೇಳುವುದೆಂದರೆ ಇವುಗಳು ತನ್ನದೇ ಆದ ವಿಶೇಷತೆಯನ್ನು ಒಳಗೊಂಡಿದ್ದು ಎಲ್ಲರಿಗೂ ಅನುಕೂಲತೆಯನ್ನು ತೋರಿಸುವಲ್ಲಿ ಸಫಲವಾಗಿದೆ.

ಲೇಖಕರು ಬರೆದಿರುವ ಪ್ರಬಂದವಾದ 'ಬೆಂಗಳೂರು' ಪ್ರಬಂಧದಲ್ಲಿ ಹಲವಾರು ವೈಶಿಷ್ಟ್ಯ ಗುಣಗಳನ್ನು ಕಾಣಬಹುದು ಇಲ್ಲಿ ಎಲ್ಲರ ವಾಸಸ್ಥಾನ ಎಂದು ತಿಳಿಯಬಹುದು. ದೇಶದ ಮೂಲೆ ಮೂಲೆಗಳಿಂದ ಬಂದು ಈ ನಗರದಲ್ಲಿ ವಾಸಿಸುತ್ತಾರೆ, ಎಲ್ಲರಿಗೂ ಇದು ವಾಸ ಸ್ಥಾನವಾಗಿದೆ. ಇಲ್ಲಿ ಕೆಲಸ ಮಾಡುವವರಿಗೆ ಕೆಲಸದ ಬರವಿಲ್ಲ ಒಂದಲ್ಲಾ ಒಂದು ಕೆಲಸ ಸಿಗುತ್ತದೆ.

ಬೆಂಗಳೂರು ಜೀವನವು ದುಬಾರಿ ಜೀವನ ಆದರೂ ಎಲ್ಲರೂ ಅಲ್ಲಿ ಹೋಗುವ ಉತ್ಸಾಹವನ್ನು ಕಾಣುತ್ತಾರೆ. ಇಲ್ಲಿ ಕೆಲಸ ಮಾಡಿದರೆ ಒಂದು ಅಹಂ ಎಂದು ಕೆಲವರು ತಿಳಿದಿರುವರು ಬೆಂಗಳೂರು ಹತ್ತಾರು ಬಾಷೆಗಳ ನಗರ ಎಲ್ಲಿ ನೋಡಿದರೂ ಜನ ಸಂದಣಿ ಅದೇ ರೀತಿ ವರ್ತಕರು ಗಿರಾಕಿಗಳು ಸುಸಂಸ್ಕೃತರು ಜೇಬುಗಳ್ಳರು ವಿಲಾಸಿಗಳು ಎಲ್ಲರನ್ನು ಕಾಣಬಹುದು.

ಲೇಖಕರು ಬೆಂಗಳೂರು ನಗರದಲ್ಲಿ ಲಾಲ್‌ಬಾಗ್‌ನ ಸೊಬಗನ್ನು ವರ್ಣಿಸಿದ್ದಾರೆ. ಕಬ್ಬನ್ ಪಾರ್ಕ್‌ನ ಸೌಂದರ್ಯವು ಎಲ್ಲರನ್ನು ಆಕರ್ಷಿಸುತ್ತದೆ. ಬೆಂಗಳೂರಿನಲ್ಲಿ ನಾಲ್ಕು ಮೂಲೆಗಳಲ್ಲಿಯೂ ಕೆಂಪೇಗೌಡ ಕಟ್ಟಿಸಿದ ಗೋಪುರಗಳನ್ನು ಮೀರಿ ಬೆಂಗಳೂರು ನಗರ ಮುಂದುವರೆದಿರುವುದು ವಿಶೇಷತೆ.

ಲೇಖಕರು ಹೇಳುವಂತೆ ದೇಶ ವಿದೇಶಗಳಿಗೆ ಹೋಗಲು ಇಲ್ಲಿಂದ ಬಸ್ಸು ಕಾರು ರೈಲು ವಿಮಾನ ಹೀಗೆ ಎಲ್ಲವೂ ದೊರಕುವುದನ್ನು ಕಾಣಬಹುದು ಎಲ್ಲ ವ್ಯವಸ್ಥೆಯೂ ದೊರೆಯುವುದರಿಂದ ಪ್ರವಾಸಿಗರು ಮತ್ತು ಜನರುಗಳು ಹೆಚ್ಚಿನ ರೀತಿಯಲ್ಲಿ ನಮ್ಮ ಬೃಹತ್ ಬೆಂಗಳೂರಿಗೆ ಬರುವರು ಎಂದು ತಿಳಿಯಬಹುದು.

ಲೇಖಕರು ಹೇಳುವಂತೆ ಬೆಂಗಳೂರು ಪ್ರಬಂದವು ವಿಶೇಷತೆಯನ್ನು ಒಳಗೊಂಡಿದ್ದು ತನ್ನ ಮೆರುಗನ್ನು ನೀಡುವಲ್ಲಿ ಪ್ರಮುಖವಾದುದು.

ಲೇಖಕರು ಬರೆದಿರುವ ಲಲಿತ ಪ್ರಬಂದಗಳ ವೈಶಿಷ್ಟ್ಯಗಳು ಒಂದೊಂದು ಪ್ರಬಂಧದಲ್ಲಿಯೂ ಒಂದೊಂದು ರೀತಿಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ರಚಿಸಿರುವರು ನಾನಾ ರೀತಿಯ ಬರಹಗಳ ಮೂಲಕ ಹಂತ ಹಂತವಾಗಿ ಕನ್ನಡ ಸಾಹಿತ್ಯದಲ್ಲಿ ಉನ್ನತ ಮಟ್ಟವನ್ನು ಏರಿದರು ಮತ್ತು ಕಿರಿಯರಿಗೆ ಮಾರ್ಗದರ್ಶಕರು ಸಹ ಆಗಿದ್ದರು ಎಂದು ತಿಳಿಯಲಾಗಿದೆ.

**ಉಪಸಂಹಾರ :**

ನಾನು ಆಯ್ದುಕೊಂಡಿರುವ " ಎ.ಎನ್ ಮೂರ್ತಿರಾವ್ ರವರ ಲಲಿತ ಪ್ರಬಂಧಗಳು" ಎಂಬ ವಿಷಯದಲ್ಲಿ ಅವರು ಲಲಿತ ಪ್ರಬಂಧಗಳಲ್ಲಿ ಕಂಡುಕೊಂಡಿರುವ ವಸ್ತು ಉದ್ದೇಶಗಳನ್ನು ಸಮೀಕ್ಷೆ ಮಾಡಲಾಗಿದೆ. ಈ ಸಮೀಕ್ಷೆಯಿಂದ ಕಂಡುಕೊಂಡ ಅಧ್ಯಯನದ ಫಲಿತಗಳನ್ನು ಈ ಕೆಳಕಂಡಂತೆ ನೋಡಬಹುದು.

ಎ. ಎನ್ ಮೂರ್ತಿರಾವ್ ರವರ ಮೊದಲ ಭಾಗ ಅಧ್ಯಾಯದಲ್ಲಿ ಉದ್ದೇಶ ಮತ್ತು ವ್ಯಾಪ್ತಿಯನ್ನು ಕಾಣಬಹುದು. ಅದು ಅವರ ಒಟ್ಟು ಪ್ರಬಂಧಗಳು ವಿಸ್ತಾರತೆಯತೆಯನ್ನು ಕಾಣಬಹುದಾಗಿದೆ.

ಪ್ರಬಂಧ ಸಾಹಿತ್ಯ ಇಂದಿನ ದಿನಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಸಾಹಿತ್ಯ ಮೊದಲಿಗೆ ಪಾಶ್ಚಾತ್ಯರಲ್ಲಿ ಕಾಣಿಸಿಕೊಂಡಿತು. ಪ್ರಬಂಧ ಸಾಹಿತ್ಯವನ್ನು ಸ್ಪಷ್ಟರೂಪದಲ್ಲಿ ಮೊದಲ ಬಾರಿಗೆ ಪರಿಚಯಿಸಿದವರು ಫ್ರಾನ್ಸ್ ದೇಶದ ಮೈಕಲ್ ಮಾಂಟೇನ್. ಈತನಿಂದ ಫ್ರಾರಂಭವಾದ ಪ್ರಬಂಧ ಸಾಹಿತ್ಯ ಇಂದಿಗೂ ಸಹ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ. ಪ್ರಬಂಧ ಸಾಹಿತ್ಯವೂ, ಚಿತ್ರಪ್ರಬಂಧ; ವಿನೋದ ಪ್ರಬಂಧ, ಜ್ಞಾನ ಪ್ರಬಂಧ ವಿಮರ್ಷಕನ ಪ್ರಬಂಧ , ಐತಿಹಾಸಿಕ ಪ್ರಬಂಧ ವೈಣಿಕ ಪ್ರಬಂಧ, ಪ್ರಕೃತಿಪರವಾದ ಪ್ರಬಂಧ, ಎಂಬ ಬಗೆಗಳನ್ನು ಒಳಗೊಂಡಿದ್ದು ಅವುಗಳ ಮಾಹಿತಿಯನ್ನು ನೀಡಲಾಗಿದೆ, ಮೊದಲಿಗೆ ಇಂಗ್ಲೀಷಿನಲ್ಲಿ ಕಾಣಿಸಿಕೊಂಡ ಪ್ರಬಂಧ ಸಾಹಿತ್ಯ ಅನಂತರ ಕನ್ನಡಕ್ಕೆ ಹರಿದು ಬಂದು ಒಳ್ಳೆಯ ಸ್ಥಾನವನ್ನು ಪಡೆದುಕೊಂಡಿತು, ಕನ್ನಡದಲ್ಲಿ ಹಲವಾರು ಲೇಖಕರು ಪ್ರಬಂಧ ಸಾಹಿತ್ಯವನ್ನು ಕೃಷಿ ಮಾಡುವ ಮೂಲಕ ಅದರ ಮೌಲ್ಯವನ್ನು ಹೆಚ್ಚಿಸಿದರು, ಆ ಮೂಲಕ ಪ್ರಬಂಧ ಸಾಹಿತ್ಯವನ್ನು ಕನ್ನಡದಲ್ಲಿ ಗಟ್ಟಿಗೊಳಿಸಿದವರೆಂದರೆ, 'ಎ.ಎನ್ ಮೂರ್ತಿರಾವ್, 'ಪು.ತಿ.ನ' 'ಕುವೆಂಪು', 'ಗೊರೂರು ರಾಮಸ್ವಾಮಿ ಅಯ್ಯಂಗಾರ್' 'ವಿ.ಸೀತಾರಾಮಯ್ಯ' 'ತೀ. ನಂ. ಶ್ರೀ' 'ರಾವ್‌ಬಹುದ್ದೂರ್' 'ಎಂ.ವಿ. ಸೀತಾರಾಮಯ್ಯ' 'ಹಾ.ಮಾ.ನಾಯಕ್' ಇನ್ನು ಮುಂತಾದವರು ಮಾಡಿದ ಕನ್ನಡ ಪ್ರಬಂಧ ಸಾಹಿತ್ಯ ಕೃಷಿಯ ಕುರಿತು ಸಮೀಕ್ಷೆ ಮಾಡಿಕೊಳ್ಳಬಹುದು,

ಎ.ಎನ್ ಮೂರ್ತಿರಾವ್ ಅವರ ಲಲಿತ ಪ್ರಬಂಧಗಳನ್ನು ಅಧ್ಯಯನ ಮಾಡಿದಾಗ ಅವರಿಗಿದ್ದ ಪ್ರಕೃತಿಪ್ರಿಯತೆ. ಕುಟುಂಬದ ಮೇಲಿದ್ದ ಪ್ರೀತಿ ಹಾಗು ಸುತ್ತಮುತ್ತಲ ಜನಸಮೂದಾಯದ ಮೇಲಿದ್ದ ವಿಶ್ವಾಸ, ದುರ್ಬಲರ ಮೇಲಿದ್ದ ಕರುಣೆ ಕಂಡುಬರುತ್ತದೆ.

ಮನೆಯಲ್ಲಿ ಅಜ್ಜಿಯರ ಮಹತ್ವ, ಹಗಲುಗನಸುಗಳ ಮಹತ್ವ, ಹೂವುಗಳ ವರ್ಣನೆಯ ಬಗ್ಗೆ. ಎತ್ತಿನಗಾಡಿಯ ಪ್ರಯಾಣದ ಅನುಭವ, ಕುರುಡನ ಮೇಲಿನ ಅನುಕಂಪ , ಹೆಣ್ಣಿನ ವಿಧ್ಯಾಭ್ಯಾಸದ ಮಹತ್ವ ಪ್ರಣಯ ಯಾತ್ರೆಗೆ ಹೋದಂತಹ ಸಂಧರ್ಭದಲ್ಲಿ ಆದಂತಹ ತೊಡಕುಗಳ, ಬಗ್ಗೆ 'ಹಗಲುಗನಸುಗಳು' ಲಲಿತ ಪ್ರಬಂಧಗಳಲ್ಲಿ ನೋಡಲಾಗಿದೆ.

ಲೇಖಕರು ಕೆನ್ಸಿಂಗ್ಟನ್ ಪಾರ್ಕ್ ಬರೆಯಲು ಕಾರಣ. ಹೋಟಲ್‌ನ ವಿಶೇಷತೆ, ಹೆಂಡತಿಯನ್ನು ಲೇಖಕರು ತಾಯ್ನುಡಿಯಲ್ಲಿ ಸಂಬೋಧಿಸಲು ಇರುವ ಕಷ್ಟ, ಹೊಸ ದಿವಾನಖಾನೆ ಲೇಖಕರ ಮನೆಗೆ ಬಂದಾಗ ಅವರ ಹೆಂಡತಿ ಕೊಟ್ಟ ತೊಂದರೆ. ಹರಕೆಗಳು ಇಂದಿನ ದಿನಗಳಲ್ಲಿ ಎಷ್ಟು ಪ್ರಸ್ತುತ , ಕ್ಲೀಷೆ ಪದದ ಅರ್ಥ, ಹುಲಿಯ ಮ್ಯನರ್ ಕಾರಿನಿಂದ ಅನುಭವಿಸಿದ ತೊಂದರೆ. ಮಹಾರಾಜ ಕಾಲೇಜಿನ ಕಾಮನ್

ರೂಂನಲ್ಲಿ ಕಳೆದ ಸಿಹಿಕ್ಷಣಗಳು , ಟೆಲಿಫೋನ್ ನಿಂದ ಆಗುವ ಅನಾನುಕೂಲಗಳು, ಸಾಹಿತಿಯ ಚಹರೆ. ಸಣ್ಣಕಥೆ ಬರೆಯುವವರ ಪಾಡು. ವಾಸಿಸಲು ಬೇಕಾದ ಸ್ವಂತ ಮನೆಯ ಮಹತ್ವ, ಹಾಗು ಲೇಖಕರ ಜನ್ಮ ಸ್ಥಳವಾದ ಅಕ್ಕಿಹೆಬ್ಬಾಳು ಊರಿನ ಮಹತ್ವ, ಎ.ಎನ್ ಮೂರ್ತಿರಾವ್ ಅವರ ವೈಶಿಷ್ಟತಿಯು ವಿಶೇಷತೆಯಿಂದ ಕೂಡಿದ್ದು ಮಹತ್ವವನ್ನು ಪಡೆಯುವಲ್ಲೀ ಇವರ ಪ್ರಬಂಧಗಳು ಹೆಚ್ಚಿನ ಸೊಬಗನ್ನು ಪಡೆದು ಸಫಲವಾಗೆವೆ ಎಂಬ ಸತ್ಯತೆಯನ್ನು ಕಾಣಬಹುದಾಗೆದೆ.

ಒಟ್ಟಿನಲ್ಲಿ ಎ.ಎನ್. ಮೂರ್ತಿರಾವ್ ಅವರ ಎಲ್ಲಾ ಪ್ರಬಂಧಗಳನ್ನು ಸಮೀಕ್ಷೆ ಮಾಡಿದರೇ ಅವರ ವ್ಯಕ್ತಿತ್ವ ನಮಗೆ ಅರಿವಾಗುತ್ತದೆ. ಸಣ್ಣ ಸಣ್ಣ ವಿಷಯಗಳು ಜೀವನದಲ್ಲಿ ನಮ್ಮನ್ನು ಎಷ್ಟು ಸುಖಿಯಾಹಿ ಇರಿಸಬಲ್ಲದೆಂದು ಅವರ ಪ್ರಬಂಧಗಳಲ್ಲಿ ವಿವರಿಸುತ್ತಾರೆ. ಅವರ ಹಗಲುಗನಸು ಪ್ರಬಂಧ ಇದಕ್ಕೆ ಒಂದು ಉದಾಹರಣೆ . ಸಣ್ಣ ಸಣ್ಣ ಪಾತ್ರಗಳು ಪ್ರಮುಖವೆನ್ನಿಸುತ್ತವೆ. ಅವರ ಪ್ರಬಂಧಗಳಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಲಕ್ಷಣ, ನವಿರಾದ ಹಾಸ್ಯಭಾವ, ನಿರೂಪಣೆಯ ಮೂಲಕ ವಿಷಯವನ್ನು ಸಮರ್ಥವಾಗಿ ಓದುಗಾರರಿಗೆ ಇಷ್ಟವಾಗುವಂತೆ ವೈಚಾರಿಕವಾಗಿ ಮತ್ತು ವೈಜ್ಞಾನಿಕವಾಗಿ ಪ್ರತಿಪಾದಿಸುತ್ತಾ ಅಭಿವ್ಯಕ್ತಿಸುತ್ತಾರೆ. ಒಟ್ಟಿನಲ್ಲಿ ಎ.ಎನ್. ಮೂರ್ತಿರಾವ್ ಅವರು ಪ್ರಬಂಧ ಸಾಹಿತ್ಯದಲ್ಲಿ ವಿಶಿಷ್ಟವಾಗಿ ಗುರುತಿಸಿಕೊಂಡು ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದಾರೆ.

ಗ್ರಂಥ ಸೂಚಿ

1. ಕೀರ್ತಿನಾಥ ಕುರ್ತುಕೋಟಿ ಸಮಗ್ರ ಸಾಹಿತ್ಯ ಸಂಪುಟ – 2 ಯುಗಧರ್ಮ ಹಾಗು ಸಾಹಿತ್ಯ ದರ್ಶನ , ಸಾಹಿತ್ಯ ಮತ್ತು ಸಾಹಿತ್ಯ ಪ್ರಜ್ಞೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಪ್ರಥಮ ಮುದ್ರಣ – 2010

2. ಡಾ//ಜವರೇಗೌಡ
ಡಾ//, ಪ್ರಧಾನ್ ಗುರುದತ್ತ (ಸಂ) :ಹೆಬ್ಬಾಳು–ಡಿ.ಎಸ್.ಮೂರ್ತಿ ಕೃಷ್ಣಮೂರ್ತಿಪುರಂ ಮೈಸೂರು – ಪ್ರಥಮ ಮುದ್ರಣ – 2002

3. ಮಳಲಿ ವಸಂತಕುಮಾರ್ :ಪ್ರಬಂಧ ಸಾಹಿತ್ಯ, ಗೀತಾ ಬುಕ್ ಹೌಸ್ ಪ್ರಥಮ ಮುದ್ರಣ – 1994

4. ಎ.ಎನ್. ಮೂರ್ತಿರಾವ್ :ಸಮಗ್ರ ಲಲಿತ ಪ್ರಬಂಧಗಳು , ಅವರ ಪುಸ್ತಕ ಗಾಂಧಿ ಬಜಾರ್ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು ಪ್ರಥಮ ಮುದ್ರಣ – 1999

5. ಎ.ಎನ್. ಮೂರ್ತಿರಾವ್ : ಸಂಜೆಗಣ್ಣಿನ ಹಿನ್ನೋಟ. ಡಿ.ವಿ.ಕೆ.ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು – ಪ್ರಥಮ ಮುದ್ರಣ – 1990

6. ರಾಜಪ್ಪ ದಳವಾಯ : ಕನ್ನಡ ಸಾಹಿತ್ಯ ಕೋಶ, ದಳವಾಯ ಪ್ರಕಾಶನ, ಅಧ್ಯಾಪಕರ ನಿವಾಸಗಳು , ಜ್ಞಾನಭಾರತಿ, ಬೆಂಗಳೂರು ವಿಶ್ವವಿಧ್ಯಾಲಯ, ಬೆಂಗಳೂರು.

7.ಸಿದ್ದಲಿಂಗಯ್ಯ ಜಿ.ಎಸ್. :ಸಾಲುದೀಪಗಳು ಡಿ.ಕೆ ಶ್ಯಾಮುಸುಂದರ ರಾವ್ ರಿಜಿಸ್ಟರ್ ಕನ್ನಡ ಸಾಹಿತ್ಯ ಅಕಾಡೆಮಿ ಪ್ರಥಮ ಮುದ್ರಣ – 1990

8. ಎ.ಎನ್.ಮೂರ್ತಿರಾವ್. ಆಯ್ದ ಲಲಿತ ಪ್ರಬಂಧಗಳು ಅಂಕಿತ ಪುಸ್ತಕ , ಗಾಂಧೀಬಜಾರ್ ಮುಖ್ಯರಸ್ತೆ· ಬಸವನಗುಡಿ, ಬೆಂಗಳೂರು. ಪ್ರಥಮ ಮುದ್ರಣ.

9. ಡಾ.ಬಸವರಾಜ್ ಸಬರದ ಮರುಚಿಂತನ ಪ್ರಥಮ ಮುದ್ರಣ 2009

10. ಡಿ.ಬಿ ರಜಿಯ ವಾಸ್ತವದ ಕನವರಿಕೆ ಪ್ರಥಮ ಮುದ್ರಣ 2002

11. ಡಾ. ಸಿ.ಎನ್ ರಾಮಚಂದ್ರ ಸಾಹಿತ್ಯವಿಮರ್ಶೆ ಪ್ರಥಮ ಮುದ್ರಣ 1990

**ಆಕರ ಗ್ರಂಥಗಳು**

**ಅಲೆಯುವ ಮನ – 1957 ಪ್ರಥಮ ಮುದ್ರಣ**

**ಮಿನುಗು ಮಿಂಚು – 1962 ಪ್ರಥಮ ಮುದ್ರಣ**

**ಹಗಲುಗನಸುಗಳು – 1937 ಪ್ರಥಮ ಮುದ್ರಣ**